ಮಕ್ಕಳ ಮುತ್ತಿನಮಾಲೆ :—೧೦–೧೨

# ಪುಟ್ಟರಸು

(ಏಳು ಕಥೆಗಳು)

ಹೊಯಿಸಳ



ಪ್ರಕಾಶಕರು

ಕಾವ್ಯಾಲಯ

ಮೈಸೂರು

# ಪರಿಚಯ

ಈ ಪುಸ್ತಕದಲ್ಲಿರುವ ಕಥೆಗಳ ತಿರುಳು ಹೀಗಿವೆ: ಹೆದರಿಕೆ ಯಾರಿಂದ ಬಂತು ; ನರಿಗೂ ಅಳಿಲು ಮೋಸ ಮಾಡಿತು ; ಗಂಗೆ ತನ್ನೂರಿಗೆ ತಾಯಾದಳು; ರುಕ್ಕಿಣಿಯ ಕನಸಿನಲ್ಲಿ ಗೂಬೆ ಗಂಗು ಸತ್ತಿತ್ತು. ಅನ್ನು ಮತ್ತು ಬಾಟರ ವಾತ್ಸಲ್ಯಕ್ಕೆ ಮೇರೆಯಿರಲಿಲ್ಲ ; ಮುಸಲ್ಮಾನ ಸಹೋದರರು ಪರಸ್ಪರ ಪ್ರೀತಿಯನ್ನು ತೋರಿಸಿದ ಜಾಗವೇ ಪುಣ್ಯಸ್ಥಳ ; ಅರಸನೂ ವ್ಯೈಪರಿಸಬೇಕು— ಈ ರೀತಿಯ ಕತೆಗಳಲ್ಲಿ ಎಲ್ಲರೂ ಒಪ್ಪಬಹುದಾದ-ಪ್ರೀತಿ, ಸಹನೆ, ಧೈರ್ಯ, ಸರಳ ನಗು, ಕಾರ್ಯದಕ್ಷತೆ ಮತ್ತು ಪ್ರಕೃತಿ ಪ್ರೇಮ-ಇವುಗಳು ಎದ್ದು ಕಾಣಲೆಂದು ಪ್ರಯತ್ನಿಸಿದ್ದೇನೆ.

ಈ ಕಥೆಗಳಿಗೆ ಬೇಕಾದ ಸಾಮಗ್ರಿಗಳನ್ನು ಯೂರೋಪಿನ ಮತ್ತು ಅಮೆರಿಕದ ಮಕ್ಕಳ ಪುಸ್ತಕ ಮಾಲೆಗಳಿಂದಲೂ, ಹಾಗು ಶ್ರೀ ವಾಲ್ಟ್‌ಡಿಸ್ನೆಯವರ "ಬ್ಯಾಂಬಿ" ಮುಂತಾದ ಮಕ್ಕಳ ಫಿಲ್ಮುಗಳಿಂದಲೂ ಆರಿಸಿಕೊಂಡಿದೆ.

ಪ್ರಪಂಚದ ಇತರ ಕಥಾವಸ್ತುಗಳಿಗೂ ಮತ್ತು ಕಥಾಸರಣಿಗಳಿಗೂ ಇವನ್ನು ತಿಳಿದಮಟ್ಟಿಗೂ ಒರೆ

ಹಚ್ಚಿ ನೋಡಿದ್ದೇನೆ. ನನಗೇನೋ ತೃಪ್ತಿ. ನಿಮಗೂ ಹಾಗೇ ಆದೀತೆಂದು ಭಾವಿಸುವ ಧೈರ್ಯಮಾಡಿದ್ದೇನೆ.

ಮಕ್ಕಳ ಸಿನಿಮಗಳಿಗೆ ನಮ್ಮ ದೇಶದಲ್ಲೂ ಇಂಥಾ ಕಥೆಗಳು ಇಳಿದು ಬರಲಿ. ಇದೇ ನನ್ನ ಬಯಕೆ.

ಈ ಕಥೆಗಳನ್ನು ಆರಿಸಿದ ಜಾಣ್ಮೆ ಶ್ರೀ ಕೂಡಲಿ ಚಿದಂಬರಂ ಅವರದು. ಸಾಹಿತ್ಯ ದೇವಿಗೆ ಜವಾಹಿರಿ ಜೋಡಿಸುವ ಕಾರ್ಯ ಅವರದಾಗಿದೆ. ಅದು ಸಾಗಲಿ ಸುರುಚಿರಂ.

**ಉತ್ತರಾಯಣ**
**೨೬-೧-೪೯**

**ಹೊಯಿಸಳ**

---

ವಿವರ



# ಪುಟ್ಟರಸು

## ೧

ಪುಟ್ಟ ಪುಟ್ಟ ಕಿರಣಗಳನ್ನು ಬಿಟ್ಟುಕೊಳ್ಳುತ್ತ ಸೂರ್ಯ ಪೂರ್ವದ ಗುಡ್ಡದ ಮೇಲೆ ಹತ್ತಿಬರುತ್ತಿದ್ದನು. ಕೆಂಪು ಬೆಳಕೆಲ್ಲ ಸೂರ್ಯನ ಸುತ್ತ ಮುತ್ತಿಕೊಂಡಿತ್ತು. ಗುಡ್ಡದ ಈಚೆಗೆ ಕೊಂಚ ಬೆಳಕಿತ್ತು. ಅದರ ಆಚೆ ಕಾಡಿನಲ್ಲಿ ಕತ್ತಲೆ. ಇತ್ತಕಡೆ ಕೊಳದಲ್ಲಿ ಆಕಾಶ ಕಾಣುತ್ತಿತ್ತು. ಅದರಲ್ಲಿ ಒಂದೆರಡು ನಕ್ಷತ್ರಗಳು ಮಿನಮಿನಗುಟ್ಟುತ್ತಿದ್ದವು. ಅದಕ್ಕೂ ಈಚೆ ಹಣ್ಣಿನ ತೋಟದಲ್ಲಿ ಗಿಣಿಗಳೆಲ್ಲ ಮಲಗಿದ್ದವು. ಅದರ ಇತ್ತಕಡೆ ಹೂವಿನ ತೋಟದಲ್ಲಿ ಪಾರಿಜಾತ ಅರಳಿ ಘಮಘಮ ಘಮಘಮ, ಎಂದು ಪರಿಮಳವನ್ನು ಬೀರುತ್ತಿತ್ತು. ಅಲ್ಲೆ ಅರಮನೆ !

ಅರಮನೆಯಲ್ಲಿ ಗರಿಥದೆಣ್ಣೆಯ ದೀಪ ಆರುತ್ತಿತ್ತು.

ಮಲ್ಲಿಗೆ ಎಣ್ಣೆಯ ದೀಪ ಸಣ್ಣಗಾಗಿತ್ತು. ಅತ್ತರೆಣ್ಣೆಯ ದೀಪ ಇನ್ನೂ ಉರಿಯುತ್ತಿತ್ತು. ತುಪ್ಪದ ದೀಪ ದೇವರ ಮುಂದೆ ನಲಿದಾಡುತ್ತಿತ್ತು. ಎಲ್ಲರಿಗು ನಿದ್ದೆ. ಬೆಳಗು ಮುಂಜೆಯ ನಿದ್ದೆ ಎಲ್ಲರ ಕಣ್ಣನ್ನೂ ಮುಚ್ಚಿಬಿಟ್ಟಿತ್ತು. ದಾದಿಯರು ಗೊರಕೆ ಹೊಡೆಯುತ್ತಿದ್ದರು. ರಾಣಿ ಕನಸು ಕಾಣುತ್ತಿದ್ದಳು. ಗೆಳತಿಯರು ಬೀಸಣಿಗೆ ಹಿಡಿದವರು ಹಾಗೇ ಒರಗಿಬಿಟ್ಟಿದ್ದರು. ಕಾವಲುಗಾರರು ಅಲ್ಲಲ್ಲೆ ಮಂಚದಬಳಿ, ಬಾಗಿಲ ಬಳಿ, ಮಹಾದ್ವಾರದ ಬಳಿ, ಹೆಬ್ಬಾಗಿಲಬಳಿ ನಿಂತಲ್ಲೆ ಕಣ್ಣುಮುಚ್ಚಿದ್ದರು.

ಚಂದ್ರ ನಗುನಗುತ್ತ ಈಕಡೆ ಇಳಿದುಬಿಟ್ಟಾಗ ಸೂರ್ಯ ಜಗಜಗಿಸುತ್ತ ಆಕಡೆ ಗುಡ್ಡಹತ್ತಿಬಿಟ್ಟನು. ಭಾರದ್ವಾಜಪಕ್ಷಿ ಎಚ್ಚರು ಎಚ್ಚರು ಎಂತ ಕೂಗಿ ಹಾರಿ ಹೋಗಿತ್ತು. ಕೋಗಿಲೆಗೆ ಅದೇನು ಅವಸರವೋ ಕಾಣೆ, ಅದು ಪಟಪಟ ರೆಕ್ಕೆ ಬಡಿದು, ಅಕ್ಕವ್ವಾ, ಚಿಕ್ಕವ್ವಾ, ಕೊಕ್ಕು ಬಿಡಿಸೇ, ಗುಟುಕುಕೊಡೇ ಅಕ್ಕವ್ವಾ ಎಂದು ಕೂಗಲಾರಂಭಿಸಿತು. ಆಗ ಕಾಗೆ ಹೊರಗೆ ಹೊರಟು ಬಂತು ಅರಮನೆ ಕಳಶದ ಮೇಲೆ ತನ್ನ ಕೊಕ್ಕನ್ನು ಉಜ್ಜಿಕೊಂಡಿತು. ಅಲ್ಲಿಲ್ಲಿ ಹುಡುಕಿತು, ಒಂದೆರಡು ಹುಳುಗಳು ಸಿಕ್ಕಿದವು. ಅವನ್ನೂ ಇನ್ನೊಂದೆರಡು ಕಾಳುಗಳನ್ನೂ ಆರಿಸಿ ಹೊಟ್ಟೆ ಚೀಲದಲ್ಲಿ ತುಂಬಿಕೊಂಡು ಗೂಡಿಗೆ ಹಾರಿಹೋಯಿತು.

ಕೋಳಿ ಹುಂಜ ಮೂರನೆಯ ಸಾರ್ಥಿ ಕಣ್ಣು ಬಿಟ್ಟಿತು. ಹೇಂಟೆಗೆ ಹೇಳಿತು : ಕೊರಕೊರಕೊರಾಂತ ಕೊರಗಬೇಡ, ಕಾವು ಸಾಕಾಯಿತೆ, ಮೊಟ್ಟೆಗಳು ಒಡೆದವೆ ನೋಡು. ಎಂದು, ಒಂದು ಹೆಜ್ಜೆ ಹೊರಗೆ ಬಂತು. ಪೌಳಿಮೇಲೆ ಹಾರಿತು. ಗರಿಗಳನ್ನೆಲ್ಲ ಒದರಿತು. ಕೊರಳೆತ್ತಿತು. ಕೆಂಪನೆ ಕಿರೀಟವನ್ನು ಅಲುಗಾಡಿಸಿಕೊಂಡು— ' ಇಕ್ಕೊ ಇಕ್ಕೊ ಬೆಳ್ಳಂ ಬೆಳಕಾಯ್ತ್ರೋ, ಇಕ್ಕೊ ಬೆಳ್ಳಂ ಬೆಳಕಾಯಿತ್ರೋ ! ' ಎಂದು ಮೂರು ಮೂರು ಸಾರಿ ಕೂಗಿ ಕೆಳಗಿಳಿದುಹೋಯಿತು. ಆಗಲೇ ನಿಜವಾಗಿ ಬೆಳಗಾಗುವುದಕ್ಕೆ ಆರಂಭ.

ಗುಬ್ಬಿಗಳೆಲ್ಲ ಹಾರಿಹಾರಿ ಬಂದವು. ಸೂರ್ಯನ ಕಿರಣಗಳೆಲ್ಲ ಬಂದು ಬಂದು ಮರಗಳ ಮೇಲೂ, ಅರಮನೆ ಗೋಪುರಗಳ ಮೇಲೂ ಬಂಗಾರದ ಬಣ್ಣ ಹಚ್ಚಿದವು. ಅರಮನೆಯ ಹೊರಭಾಗದಲ್ಲಿ ಸ್ವಲ್ಪ ಗುಸುಗುಸು ಸದ್ದಾಯಿತು.

೨

ಆಗ ಪುಟ್ಟರಸು ಹಾಸಿಗೆ ಬಿಟ್ಟು ಎದ್ದು ಬಂದನು. ಪುಟ್ಟ ಪುಟ್ಟ ಹೆಜ್ಜೆಯಿಟ್ಟು ಶಯನಮಂದಿರ ಬಿಟ್ಟನು. ಅಂತಃಪುರವನ್ನು ದಾಟಿದನು. ಕೈಸಾಲೆಯ ಉದ್ದಕ್ಕೂ ನಡೆದು ಹೋದನು. ಬಾಗಿಲು ದಾಟಿದನು. ಮಹಾಬಾಗಿಲನ್ನು ದಾಟಿದನು. ಪುಟ್ಟಪುಟ್ಟ ಹೆಜ್ಜೆಯಿಟ್ಟು

ಬಂಗಾರದ ಮೆಟ್ಟಲನ್ನು, ಬೆಳ್ಳಿಯ ಹಂತಗಳನ್ನು, ಅಮೃತಶಿಲೆಯ ಕಲ್ಲುಗಳನ್ನು ಇಳಿದು ಬಂದನು.

ಕಪ್ಪನೆ ಕಸ್ತೂರಿ ಹಾದಿಯಿಂದ, ಕೆಂಪನೆ ಕುಂಕುಮದ ಹಾದಿಗೆ ಬಂದನು. ಅಲ್ಲಿ ಬಂತು ಬೆಳ್ಳಗೆ ಮುತ್ತಿನ ರಸ್ತೆ. ಅಲ್ಲಿಂದಾಚೆಗೆ ಪಚ್ಚೆ ಮೈದಾನ.

ಪುಟ್ಟರಸು ಪಚ್ಚೆ ಮೈದಾನದಲ್ಲಿ ನಿಂತುಕೊಂಡನು. ಅಲ್ಲಿ ಬಿಸಿಲು ಕಿರಣಗಳೆಲ್ಲ ಬಂದು ಅವನನ್ನು ಮುತ್ತಿಕೊಂಡವು. ಈಗ ಪುಟ್ಟರಸಲ್ಲ ಅವನು-ಬಂಗಾರದರಸು, ಚಿನ್ನದರಸು ! ಅವನಿಗೆ ಬಹಳ ಹರ್ಷವಾಯಿತು. ಚಪ್ಪಾಳೆ ತಟ್ಟಿಕೊಂಡು ನಕ್ಕುಬಿಟ್ಟನು, ನಲಿದಾಡಿಬಿಟ್ಟನು, ಕುಣಿದಾಡಿಬಿಟ್ಟನು. ಅದೇ ಸಮಯದಲ್ಲಿ ನೆಲದಮೇಲಿನ ಹೂವೆಲ್ಲ ಅರಳಿದವು. ಅನಂತರ ಪೊದೆಯಮೇಲಿನ ಹೂಗಳೆಲ್ಲ ಅರಳಿದವು. ಬಳ್ಳಿಯಮೇಲಿನ ಮೊಗ್ಗುಗಳೆಲ್ಲ ಕಣ್ಣುಬಿಟ್ಟು ನಕ್ಕವು. ಆ ಶಬ್ದವನ್ನು ಕೇಳಿ ಮರದ ಮೇಲಿನ ಎಲೆಗಳು ತಮ್ಮ ಮೊಗ್ಗುಗಳಿಗೆಲ್ಲ ಏಳಿರಿ ಏಳಿರಿ ಎಂದು ಎಬ್ಬಿಸಿಬಿಟ್ಟವು.

ವಿಷ್ಣುಕಾಂತಿ ಗರಿಕೆಯ ನಡುವೆ ಅರಳಿತು. ತುಂಬೆ ಗೋರಂಟಿ ಪೊದೆಗಳ ನಡುವೆ ಅರಳಿದವು. ಮಲ್ಲಿಗೆ ಮಾಧವಿ ಬಳ್ಳಿಗಳ ಮೇಲೆ ಅರಳಿದವು. ಸಂಪಗೆ, ಸುರಗಿ, ನಾಗಲಿಂಗ ಮೊದಲಾದುವೆಲ್ಲ ದಳಗಳನ್ನು ಬಿಡಿಸಿಕೊಂಡು ಮರಗಳ ಮೇಲೆ ನಕ್ಕುಬಿಟ್ಟವು. ಆಗ ಎಲ್ಲೆಲ್ಲೂ ಪರಿಮಳ.

ಹೀಗೆ ಪರಿಮಳ ಹಬ್ಬಿದಕೂಡಲೆ ದುಂಬಿಗಳು, ಜೇನುಗಳು, ಚಿಟ್ಟೆಗಳು ಮೀಸೆಗಳನ್ನೂ ರೆಕ್ಕೆಗಳನ್ನೂ ತೀಡಿ ಸರಿಮಾಡಿಕೊಂಡು, ನಲಿದುಬಂದು, ತೆವಳಿ ಹೋದವು, ಹಾರಿಬಂದವು, ಮತ್ತೆ ನುಸುಳಿಕೊಂಡು ಹೋಗಬೇಕಾದಲ್ಲಿಗೆ ಹೋದವು.

ಅದೇ ಸಮಯದಲ್ಲಿ ಒಂದು ಚೇಳು ಅಲ್ಲಿಗೆ ಬಂತು. ಆಕಡೆ ಕಾಲು ಈಕಡೆ ಕಾಲುಗಳನ್ನು ಎತ್ತಿ ಇಳಿಸಿ ಕೊಂಡು, ಮುಂದಿನ ಕೊಂಡಿಗಳನ್ನು ಒಲಾಡಿಸಿಕೊಂಡು ಬಾಲವನ್ನು ಬಾಗಿಸಿಕೊಂಡು ಅಲ್ಲೇಬಂತು—ಆ ಚೇಳು !

ಪುಟ್ಟರಸು ಆಚೇಳನ್ನು ಕಂಡು ಸಂತೋಷದಿಂದ ಮಾತನಾಡಿಸಿದನು. ಅದರ ಬಾಲವನ್ನು ಹಿಡಿದು ಮೇಲೆ ತ್ತಿದನು. ಮತ್ತೆ ಅದರ ಜಾಗದಲ್ಲೇ ಅದನ್ನು ಬಿಡುವುದ ರಲ್ಲಿದ್ದನು. ಪುಟ್ಟರಸಿನ ಕೈಲಿ ಅದು ಆನಂದಪಟ್ಟಿತು. ಬಿಸಿಲಲ್ಲಿ ನಲಿದಾಡಿತು. ಅವರಿಬ್ಬರೂ ಗೆಳೆಯರಾದರು.

೨

ಇದೇ ವೇಳೆಗೆ ಅರಮನೆಯ ಮೆಟ್ಟಲಿನಿಂದ ಯಾರೋ ಕೂಗಿದರು—

ಹಾಹಹಾ ! ಬುದ್ದಿಯೋರು
ಪುಟ್ಟ ಬುದ್ದಿಯವರು
ಹಾ ಹ ಹ ಹಾ!

ಅದು ಯಾರು ಹೀಗೆ ಹೆದರಿ ಕೂಗಿದವರು ?

ಪುಟ್ಟದಾಟಿ ! ಆಕೆಗೆ ಕುದುರೆ ಕಂಡರೆ ಕುಚೋದ್ಯ. ಕಪ್ಪೆ ಕಂಡರೆ ಕಂಪನ ! ಪಟ್ಟದಾನೆ ಕಂಡರೆ ಸರಸ, ಪುಟ್ಟ ಚೇಳು ಕಂಡರೆ ನಡುಕ ಎಂದರೆ ಮೈನಡುಕ ! ಪುಟ್ಟರಸು ಕೈಯಲ್ಲಿ ಏನೋ ಹಿಡಿದಿದಾನೆ, ಅದು ಅವನನ್ನು ಕಚ್ಚಿ ಬಿಡುವುದು ಎಂದು ಹೆದರಿಕೆ. ಇಷ್ಟರಮೇಲೆ ಸುಮ್ಮನಿದ್ದರೆ—ಕಂಡರೂ ಸುಮ್ಮನಿದ್ದೆಯಾ ಭಂಡದಾಸಿ, ಎಂದು ಕಂಡಕಂಡವರೆಲ್ಲ ದಂಡಿಸುವರೆಂಬ ಭಯ. ಅದಕ್ಕೇ ಅವಳು ಕೂಗಿಕೊಂಡು ಬಂದಳು—

ಹಾಹಹಹಾ ! ಬುದ್ದಿಯೋರು<br>ಪುಟ್ಟ ಬುದ್ದಿಯೋರು<br>ಹಾ ಹ ಹ ಹಾ !

ಆಗ ಪುಟ್ಟರಸರಿಗೆ ಏನಾಯ್ತೋ ಕಾಣೆ. ಅದನ್ನು ಕೆಳಗೆ ಎಸೆದುಬಿಟ್ಟರು. ಅದು ಸಹ ಬೆದರಿ ಇವರ ಕಾಲಿಗೇ ಅಂಟಿಕೊಂಡಿತು. ಪುಟ್ಟರಸರು ಕಾಲು ಜಾಡಿಸಿದರು. ಚೇಳು ಅಲ್ಲಿಂದ ಅವರ ಹೆಜ್ಜೆಬಳಿಗೆ ಬಂತು. ಅಲ್ಲಿಂದ ಮತ್ತೆ ಜಾಡಿಸಿ ಎಸೆದರು. ಚೇಳಿಗೆ ಸಿಟ್ಟುಬಂದು ಕೊಂಡಿ ಎತ್ತಿಕೊಂಡು ನಿಂತುಬಿಟ್ಟಿತು. ಆ ಬಿಸಿಲಲ್ಲಿ ಆ ಚೇಳಿಗೆ ಮಹಾ ರೋಷ ಉಕ್ಕಿಬಂದುಬಿಟ್ಟಿತು.

ಈ ವೇಳೆಗೆ ಪುಟ್ಟದಾದಿ ಓಡಿಹೋಗಿ ದೊಡ್ಡ ದಾದಿಯನ್ನು ಕರೆತಂದಳು. ಆವಳು ದೊಡ್ಡದಾಗಿ ಚೀರಿಕೊಂಡಳು. ಅವಳ ಅಂಜಿಕೆ ಇನ್ನೂ ಹೆಚ್ಚಿನದಾಗಿತ್ತು.

ದೊಡ್ಡದಾದಿ ಬಂದು ನೋಡಿದಳು. ಪುಟ್ಟದಾದಿ ಪುಟ್ಟರಸನನ್ನು ತಬ್ಬಿಕೊಂಡು ಕೂತಳು. ದೊಡ್ಡದಾದಿ ಹಿಂದಕ್ಕೆ ಓಡಿಬಿಟ್ಟಳು.

ದೊಡ್ಡದಾದಿ ಹೋಗಿ ಮಹಾದಾದಿಯನ್ನು ಕರೆತಂದಳು. ದೊಡ್ಡದಾದಿ-ಪುಟ್ಟರಸು ಪುಟ್ಟದಾದಿಯರ ಬಳಿ ನಿಂತಳು. ಮಹಾದಾದಿ ಮಹತ್ತಾಗಿ ಅಂಜಿದಳು. ಮಹತ್ತಾಗಿ ಚೀರಿದಳು. ಮಹಾರಾಣಿಯ ಬಳಿಗೆ ಓಡಿಬಿಟ್ಟಳು. ಅರಮನೆಯ ಅಂತಃಪುರದಲ್ಲಿ ವರದಿಮಾಡಿದಳು.

೪

ಚೇಳು, ಮಹಾ ಚೇಳಾಗಿ, ಮಹಾ ಹುಳುವಾಗಿ, ಮಹಾಸರ್ಪವಾಗಿ, ಮಹಾ ಮಾಯಾವಿ ರಾಕ್ಷಸನಾಗಿದೆ ಎಂದು ವರದಿಯಾಗಿತ್ತು. ಅದು ತಲೆಯನ್ನು ತೋರಿಸಿತೆಂದೂ, ಒಳಕ್ಕೆಳೆದುಕೊಂಡಿತೆಂದೂ, ಎರಡು ತಲೆಯದೆಂದೂ, ಮೂರು ತಲೆಯದೆಂದೂ ವರದಿಯಾಗಿತ್ತು.

ಕ್ಷಣಕ್ಷಣಕ್ಕೂ ಬಿಸಿಲೇರುತ್ತಿತ್ತು. ಕ್ಷಣಕ್ಷಣಕ್ಕೂ ಗದ್ದಲ ಹೆಚ್ಚುತ್ತಿತ್ತು. ಕ್ಷಣಕ್ಷಣಕ್ಕೂ ಆ ಪ್ರಾಣಿಯು ಮಹಾಭಯಂಕರವಾಗಿ ಬೆಳೆದುಬಿಟ್ಟಿತು. ಅರಮನೆಗೆ ಅರಮನೆಯೇ ಅಂಜಿ ಅತ್ತಿಕಾಯಾಗಿತ್ತು.

ಮಹಾರಾಣಿಯವರು ಹಾಸಿಗೆಬಿಟ್ಟೆದ್ದು. ಬಚ್ಚಲಿಗೆ ಬಿಜಮಾಡಿಸಿದರು. ಅಲ್ಲಿಂದ ಸಜ್ಜೆಗೆ ದಯಮಾಡಿಸಿದರು. ಅಲ್ಲಿಂದ ಕೈಸಾಲೆಗೆ ಬಿಜಮಾಡಿಸಿದರು. ಕಾವಲುಗಾರನಿಗೆ ಹೇಳಿಕಳುಹಿಸಿದರು.

ಕಾವಲುಗಾರ ನಡನಡುಗುತ್ತ ಬಂದನು. ಕ್ಷಮಿಸ ಬೇಕು ಸನ್ನಿಧಾನ! ಎಂದು ನಡುಗುತ್ತ ಬಂದು ನಿಂತನು. ದಾದಿ, ದೊಡ್ಡದಾದಿ, ಮಹಾದಾದಿಯರೆಲ್ಲ ಅಳುತ್ತ ನಿಂತಿದ್ದರು. ಕಾವಲುಗಾರನು ಬಂದುನೋಡಿ ರಾಣಿಯ ವರಿಗೆ ವರದಿಮಾಡಿ, ಮೀಸೆದಾಸನನ್ನು ಕರೆತಂದನು. ಆತನೋಡಿಬಂದು ವರದಿಮಾಡಿ ದಾಡೀಪತಿಯನ್ನು ಕರೆ ತಂದನು.

ಎಲ್ಲರೂ ಒಬ್ಬರ ಹಿಂದೊಬ್ಬರು ನಡುಗುತ್ತ ನಿಂತಿ ದ್ದಾಗ ಆ ಪ್ರಾಣಿಯು ಮಹಾಮಾಯಾಸರ್ಪವಾಗಿ ಇಕ್ಕಳಗಳಂಥ ಕೈಗಳಿಂದಲೂ, ಬಿಲದಂಥ ಬಾಯಿಂದಲೂ ಪಾತಾಳ ಗರುಡಿಯಂಥ ಬಾಲದಿಂದಲೂ ಕೂಡಿ ಭಯಂಕರವಾಗಿ ಮಾರ್ಪಟ್ಟಿತು. ವಿಷದ ಹೊಗೆಯನ್ನೂ, ಬೆಂಕಿಯ ಕೆಂಪು ಜ್ವಾಲೆಯನ್ನೂ ಹರಿಸುತ್ತ ಸುತ್ತ ಸುತ್ತ ತಿರುಗುತ್ತ ನಿಂತಜಾಗ ಬಿಡದೆ ಇತ್ತು.

ಮಹಾರಾಣಿಗೆ ಮಹಾಹೆದರಿಕೆ.—ಪುಟ್ಟರಸರನ್ನು ಕಾಪಾಡುವವರಿಲ್ಲವೆ, ಪುಟ್ಟಬುದ್ಧಿಯವರ ಪಾಲಿಗೆ ರಕ್ಷ ಕರೇ ಇಲ್ಲವೆ—ಎಂದು ಕೂಗಿಕೊಂಡರು. ಆಗ ಮಹಾ ರಾಣಿಯವರು ಬಂಗಾರದ ಮೆಟ್ಟಿಲಬಳಿಗೆ ಬಿಜಮಾಡಿ ಬಂದು ನಿಂತಿದ್ದರು.

ಈ ಕೂಗನ್ನು ಕೇಳಿ ಪುಟ್ಟರಸರ ಬಳಿ ನಿಂತವರೆಲ್ಲ ಹಾಹಾಕಾರ ಮಾಡಿ ಕೂಗಿದರು. ಆಗ ಪುಟ್ಟರಸರಿಗೂ

ಅಂಜಿಕೆಯಾಯಿತು. ಅವರೂ ಕೂಗಿಕೊಂಡು ಅಳಲಾರಂಭಿಸಿದರು.

ಅರಮನೆಯ ಮುಂದೆ ಸಾಲುಗಟ್ಟಿ ಜನ ನಿಂತರು. ಗುಂಪುಗೂಡಿ ಜನ ನಿಂತರು. ಯಾವುದೋ ಮೂರು ನಾಲ್ಕು ತಲೆಗಳ ರಾಕ್ಷಸ ಆಕಾಶದಿಂದ ಇಳಿದು ಬಂದಿದೆಯೆಂದು ಎಲ್ಲೆಲ್ಲೂ ವರ್ತಮಾನ ಹರಡಿತು.

೫

ಈ ವೇಳೆಗೆ ಬಿಸಿಲು ಚುರುಕ್ಕೆನ್ನುವಹಾಗೆ ಹೆಚ್ಚುತ್ತ ಬಂದಿತ್ತು. ಆವೇಳೆಗೆ ಅರಳದಿದ್ದ ಹೂಗಳೇ ಇರಲಿಲ್ಲ. ಮತ್ತು ಆಗ ಗೂಡುಬಿಟ್ಟು ಹಾರಿಬರದಿದ್ದ ಹಕ್ಕಿಗಳೇ ಇರಲಿಲ್ಲ. ಪಾರಿವಾಳಗಳು ಗುಬ್ಬಳಿಸಿಕೊಂಡು ಅರಮನೆ ಕಿರುಮನೆಯ ಮೇಲೆಲ್ಲ ಓಡಾಡುತ್ತಿದ್ದವು. ಗಿಳಿಗಳು ಹಾರಾಡಿ ಹಾಡಿಕೊಂಡು ಹಣ್ಣಿಂದ ಹಣ್ಣಿಗೆ ಹಾರಿ ಕೊಕ್ಕಿಟ್ಟು ಕಚ್ಚಿನೋಡುತ್ತಿದ್ದವು. ಕೋಗಿಲೆ ಮೈನಾಗಳು ಎಲೆಮರೆಯಲ್ಲಿ ಕೂತು ಕೂಗುತ್ತ ಇದ್ದವು. ಈ ಚೇಳು ರಾಕ್ಷಸನಾದ ಸಮಾಚಾರವು ಅವುಗಳಲ್ಲಿ ಯಾವುದಕ್ಕೂ ಗೊತ್ತಿರಲಿಲ್ಲ. ಅವು ಆನಂದದಿಂದ ಇದ್ದವು. ನೆಲದಮೇಲೆ ಈ ಪಚ್ಚೆಯ ಮೈದಾನದಲ್ಲಿ ಹೂವಿನ ಬೇಲಿಯ ಬಳಿಯಿಂದ ಆರಂಭವಾಗಿ, ಮುತ್ತಿನ ರಸ್ತೆ, ಕುಂಕುಮದ ಹಾದಿ, ಕಸ್ತೂರಿ ಬೀದಿಗಳಲ್ಲಿ ಅರಮನೆಯ ಮಹಾದ್ವಾರದವರೆಗೆ ಭಯಂಕರ ಕೋಲಾಹಲ ! ಪುಟ್ಟ

ರಸಿನಿಂದ ಮಹಾರಾಣಿಯುವರೆಗೆ ಅಂಜಿಕೆಯು ತಾಂಡವ ವಾಡುತ್ತಿತ್ತು. ಎಲ್ಲರ ಮುಖಗಳೂ ಬೆಳ್ಳಗಾಗಿದ್ದವು. ಎಲ್ಲರ ಕಣ್ಣುಗಳಲ್ಲೂ ಭಯ ಹತ್ತಿಕೊಂಡು ಉರಿಯುತ್ತಿತ್ತು.

ಸಿಪಾಯಿಯು ಹೋಗಿ ಮಹಾಸಿಪಾಯಿಗೆ ಹೇಳಿದ. ಮಹಾಸಿಪಾಯಿ ಪುಟ್ಟ ಸೇನಾಪತಿಗೆ ಹೇಳಿದ. ಪುಟ್ಟಸೇನಾಪತಿ ದೊಡ್ಡಸೇನಾಪತಿಗೆ ಹೇಳಿಕೆ ಕೊಟ್ಟನು. ದೊಡ್ಡಸೇನಾಪತಿ ಮಹಾಸೇನಾಪತಿಗೆ ವರದಿಮಾಡಿದನು. ಮಹಾಸೇನಾಪತಿ ಒಬ್ಬ ಮಹಾನಾಯಕನನ್ನು ಮಹಾರಾಜರಲ್ಲಿಗೆ ನಿವೇದಿಸಿಕೊಳ್ಳಲು ಕಳಿಸಿ, ತಾನೇ ಖುದ್ದಾಗಿ ಅರಮನೆಗೆ ಮಹಾಸೈನ್ಯದೊಡನೆ ಬಂದಿಳಿದನು.

ಅವರಿಗೆ ವರ್ತಮಾನ ಹೀಗೆ ಹೋಗಿತ್ತು.—ಈ ದಿನ ಬೆಳಗ್ಗೆ ಹೂಬಿಸಿಲ ವೇಳೆಯಲ್ಲಿ ಅರಮನೆಯ ಪಚ್ಚೆಮೈದಾನದಲ್ಲಿ ಕಬ್ಬಿಣದ ವಜ್ರಾಯುಧಗಳನ್ನು ಧರಿಸಿದ ರಾಕ್ಷಸನು ಆಕಾಶದಿಂದ ಬಂದಿಳಿದಿದ್ದಾನೆ. ಆತನಿಗೆ ಮೂರುತಲೆ. ಒಂದು ತಲೆ ಮಾತ್ರ ದೇಹದೊಳಕ್ಕೆ ಹೋಗುತ್ತ ಹೊರಗೆ ಬರುತ್ತಾ ಇದೆ. ರಾಕ್ಷಸ ಮಹಾನಿದ್ದೆಯಲ್ಲಿ ಮಲಗಿದೆ. ಪುಟ್ಟರಸರು, ಆ ರಾಕ್ಷಸನನ್ನು ಎಬ್ಬಿಸಿ ಕೊಂದಹೊರತು ಈಚೆಗೆ ಕದಲುವುದಿಲ್ಲವೆಂದು ಅಲ್ಲೇ ನಿಂತುಬಿಟ್ಟಿದ್ದಾರೆ. ಅರಮನೆಯೆಲ್ಲ ಅಲ್ಲೋಲ ಕಲ್ಲೋಲವಾಗಿದೆ. ಇತ್ಯಾದಿ.

ಮಹಾಸೇನಾಪತಿ ಸೈನ್ಯವನ್ನು ಸಿದ್ಧಮಾಡಿಕೊಂಡು ಅರಮನೆಯ ಹೆಬ್ಬಾಗಿಲಾಚೆ-ಕಾದುನಿಂತಿದ್ದನು. ದೊಡ್ಡ ರಸರ ದೊಡ್ಡಪ್ಪಣೆಯಿಲ್ಲದೆ ಒಳಗೆ ಹೋಗುವುದು ಹೇಗೆ? ಮಹಾ ಸೇನಾಪತಿ ಒಳಗೆ ಹೋಗಲಿಲ್ಲ.

ಪುಟ್ಟರಸರು ಅಳುತ್ತ ಇದ್ದರು. ಚೇಳು ಮಹಾ ಚೇಳಾಗಿ, ಮಹಾಸರ್ಪವಾಗಿ, ಮಹಾರಾಕ್ಷಸನಾಗಿತ್ತು. ಅದನ್ನು ಎದುರಿಸಿ ಕೊಲ್ಲುವವರು ಯಾರೂ ಇಲ್ಲ ವಾಗಿತ್ತು.

೬

ಈ ವೇಳೆಗೆ ಬಿಸಿಲು ಎಲ್ಲೆಲ್ಲೂ ಹಾಸಿತ್ತು. ಎಲೆಗಳ ಮೇಲಿಂದ ಹೂಗಳ ಮೇಲಿಂದ ಮಂಜಿನ ಮುತ್ತುಗಳೆಲ್ಲ ಮಾಯವಾಗಿ ಹೋಗಿದ್ದವು. ಎಲ್ಲೆಲ್ಲೂ ಹೂಗಳ ಪರಿ ಮಳಕ್ಕೆ ಹಾರಿ ಬಂದ ಜೇನುಗಳ ಝೇಂಕಾರ, ಹಕ್ಕಿಗಳು ಸುತ್ತಮುತ್ತ ಹುಳುಹುಪ್ಪಟ್ಟೆ ಹಿಡಿದು, ಕಾಳು ಕಡಿ ಹೆಕ್ಕಿ ಮರಿಗಳಿಗೆ ಮುಕ್ಕಿಸಿ, ತಮ್ಮ ಆಹಾರಕ್ಕಾಗಿ ಹೊಲ ಗದ್ದೆಗಳಿಗೆ ಹಾರಿಹೋಗಿದ್ದವು. ಮರಗಳು ತಮ್ಮ ನೆರಳು ಗಳನ್ನೆಲ್ಲ ಸಣ್ಣಸಣ್ಣದಾಗಿ ಸುತ್ತಿಕೊಂಡಿದ್ದವು. ಹತ್ತಿರದ ಕೊಳದಲ್ಲಿ ತಾವರೆ ಅರಳಿತ್ತು. ಹಂಸಗಳು ಓಲಾಡುತ್ತ ಆನಂದವಾಗಿದ್ದವು. ಸೂರ್ಯನು ಆಕಾಶದಲ್ಲಿ ನಿಂತು ಈ ಕೊಳದ ನೀರಲ್ಲಿ ಮೋರೆ ನೋಡಿಕೊಳ್ಳುತ್ತಿದ್ದನು! ಮೀನುಗಳು ಚೆಲ್ಲಾಟವಾಡುತ್ತಿದ್ದವು.

ಇಷ್ಟು ಹೊತ್ತಿಗೆ ಅರಮನೆಯ ನವಿಲುಗಳು ಹಾರಾಡಿದವು—ರೆಕ್ಕೆ ಬಿಚ್ಚಿ ಗರಿಕೆದರಿ ನಿಂತವು, ನಲಿದವು. ಈ ಮನುಷ್ಯಗುಂಪು ಸಾಲಾಗಿ ನಿಂತದ್ದನ್ನು ನೋಡಿ ಒಬ್ಬೊಬ್ಬರನ್ನೂ ಮಾತಾಡಿಸಿಕೊಂಡು ರಾಜಕುಮಾರನ ಬಳಿಗೆ ಬಂದು ಅಲ್ಲಿ ಕುಕ್ಕಿ ಇಲ್ಲಿ ಹೆಕ್ಕಿ ಎಲ್ಲೋ ಹಾರಿ ಹೋದವು. ಅರಮನೆಯ ಹುಲ್ಲೆಕರುವೂ ಹಾಗೆ ಹೀಗೆ ಅಲ್ಲಿ ಮೂಸಿ ಇಲ್ಲಿ ಮೂಸಿ, ಯಾರೂ ಮಾತಾಡಿಸಲಿಲ್ಲವೆಂದು ನೆಗೆದು ಹೋಯಿತು.

ಸಾಲು ಸಾಲಾದ ಈ ಅಂಜಿಕೆ ಬೊಂಬೆಗಳು ನಿಂತೇ ಇದ್ದವು. ಬೆದರಿಸಿದ ಆ ಭೂತವನ್ನು ನೋಡಿದವರಾರೂ ಇರಲಿಲ್ಲ. ರಾಜಕುಮಾರನು ಆಗ ಕಣ್ಣು ಮುಚ್ಚಿ ನಿಂತವನು ಇನ್ನೂ ತನ್ನ ಕೈಗಳಿಂದ ಕಣ್ಣು ಮುಚ್ಚಿಕೊಂಡೆ ನಿಂತಿದ್ದನು. ಮಹಾರಾಣಿಯವರು ಚಿನ್ನದ ಮೆಟ್ಟಿಲು ಇಳಿದು ಬೆಳ್ಳಿ ಮೆಟ್ಟಿಲಿಗೆ ಬಂದಿದ್ದರು.

೭

ಈ ಮಹಾ ಸುದ್ದಿಯು ಮಂತ್ರಿಯ ಮನೆಗೂ ಹೋಯಿತು. ಮಹಾಮಂತ್ರಿಯು ಮಹಾರಾಜರ ಸಂಗಡ ಬೇಟೆಯಾಡುವುದಕ್ಕೆ ಹೋಗಿದ್ದನು. ಅಂಥ ಸಂದರ್ಭದಲ್ಲಿ ಮಾಡುವುದೇನು? ಮಂತ್ರಿಯ ಮಗನೇ ಬಂದು ಪುಟ್ಟರಸರಿಗೆ ಪುಟ್ಟ ಮಂತ್ರಿಯಾಗಿರಬೇಕಾಗಿತ್ತು! ಆದ್ದರಿಂದ ಪುಟ್ಟ ಮಂತ್ರಿ ಬಂದನು.

ಅರಮನೆಯ ಮುಂದೆ ಮಹಾ ಸೈನ್ಯ ನಿಂತಿತ್ತಲ್ಲವೆ. ಅದನ್ನು ದಾಟಿಕೊಂಡು, ಗುಂಪಿನಲ್ಲಿ ತೂರಿಕೊಂಡು, ಹೂವಿನ ಹಂದರಗಳ ತಳದಲ್ಲಿ, ಹಣ್ಣು ಗೊಂಚಲುಗಳ ಬುಡದಲ್ಲಿ, ತನ್ನ ಪುಟ್ಟ ರುಮಾಲು ಕುಚ್ಚನ್ನು ಅಲ್ಲಾಡಿಸಿಕೊಂಡು, ಅಲ್ಲೇ ಬಂದನು. ಪುಟ್ಟರಸರ ಮುಂದೆ ನಿಂತನು.

ಯಾರ್ಯಾರ ಮೋರೆ ನೋಡಿದರೂ ಒಬ್ಬರೂ ಈ ಪುಟ್ಟ ಮಂತ್ರಿಯನ್ನು ಮಾತಾಡಿಸಲಿಲ್ಲ. ಆದ್ದರಿಂದ ಆ ಪುಟ್ಟಮಂತ್ರಿ ಪುಟ್ಟರಸರ ಮುಂದೆ ನಿಂತುಕೊಂಡನು. ಮಾತಾಡಿಸಿದನು. ಪುಟ್ಟರಸರ ಒಂದು ಕೈ ಕಣ್ಣುಗಳನ್ನು ಬಿಗಿಯಾಗಿ ಹಿಡಿದುಕೊಂಡಿತ್ತು. ಇನ್ನೊಂದು, ಅಮೃತ ಹಸ್ತವನ್ನು ನೀಡಿ ತೋರಿಸಿತು. ತೋರಿಸಿದ ಎಡೆಯಲ್ಲಿ ಅಲ್ಲಿ ಪುಟ್ಟಮಂತ್ರಿ ನೋಡಿದನು :—

ಅಲ್ಲೊಂದು ಪುಟ್ಟ ಚೇಳಿನಮರಿ !
ಅದಕ್ಕೆ ಬಾಲದ ತುದಿಯೇ ಇರಲಿಲ್ಲ !
ಅದು ಸಾಯುವ ಹಾಗೆ ಆಗಿತ್ತು !

ಆಗ ಆ ಮಂತ್ರಿಕುಮಾರನು ತನ್ನ ಜೇಬಿನ ಒಳಗಿನಿಂದ ಒಂದು ಚೂರು ಜರತಾರಿ ದಾರವನ್ನು ತೆಗೆದು ಆ ಚೇಳಿನ ಬಾಲಕ್ಕೆ ಕಟ್ಟಿ ಎತ್ತಿ ಹಿಡಿದನು. ಪುಟ್ಟರಸರ ಬಲಗೈಯನ್ನೂ ಮೆಲ್ಲಗೆ ಈಚೆಗೆ ಎಳೆದು, ಕಣ್ಣುಬಿಡಿಸಿ, ಕಟ್ಟಿಹಾಕಿದ ಆ ಚೇಳಿನ ಮರಿಯನ್ನು ತೋರಿಸಿ ಗಟ್ಟಿಯಾಗಿ ನಕ್ಕುಬಿಟ್ಟನು.

೮

ಪುಟ್ಟರಸು ಅದನ್ನು ತನ್ನ ಕೈಗೆ ತೆಗೆದುಕೊಂಡು ಧೈರ್ಯವಾಗಿ ತಾನೂ ನಕ್ಕೂ ಬಿಟ್ಟನು. ಆಗ ಪುಟ್ಟದಾದಿ ಪುಟ್ಟರಸರನ್ನು ಎತ್ತಿಕೊಂಡು ನಕ್ಕುಬಿಟ್ಟಳು. ಅನಂತರ ಮಹಾದಾದಿ ಪುಟ್ಟರಸರನ್ನು ಹೆಗಲಮೇಲೆ ನಿಲ್ಲಿಸಿಕೊಂಡು ನಲಿದಾಡಿ ನಕ್ಕೂ ಬಿಟ್ಟಳು. ಅನಂತರ ಮಹಾರಾಣಿ ಬೆಳ್ಳಿಮೆಟ್ಟಲು ಇಳಿದು, ಕಸ್ತೂರಿ ಹಾದಿಯಲ್ಲಿ ಹಾದು ಕುಂಕಮದ ಹಾದಿಯಲ್ಲಿ ನಡೆದು, ಮುತ್ತಿನ ರಸ್ತೆಯಲ್ಲಿ ಹೆಜ್ಜೆಯಿಟ್ಟರು. ಪುಟ್ಟರಸರು ಆ ಜರೀದಾರದ ತುದಿ ಯಲ್ಲಿದ್ದ ಕರಿ ಚೇಳಿನ ಮರಿಯನ್ನು ತನ್ನ ತಾಯಿರಾಣಿಗೆ ತೋರಿಸಿ ನಕ್ಕರು. ಆಗ ಮಹಾರಾಣಿಯವರೂ ಗಂಭೀರ ವಾಗಿ ನಕ್ಕರು.

ಆಗಲೇ ಕಾವಲುಗಾರನು ನಕ್ಕನು. ಮಿಾಸೆದಾಸನೂ ನಕ್ಕನು. ದಾಡೀಪತಿಯೂ ನಕ್ಕನು. ಸೇನಾಧಿಪತಿಯೂ ನಕ್ಕನು. ಮಹಾಸೇನಾಪತಿಯೂ ನಕ್ಕನು. ಅರಮನೆಯ ಮುಂದಿನ ಸಾಲು ಸಾಲು ಗುಂಪುಗುಂಪೆಲ್ಲ ನಕ್ಕು ನಲಿ ದಾಡಿತು. ಮಹಾದ್ವಾರದ ಮುಂದಿನ ಮಹಾ ಸೇನೆಯೂ ಹೊಟ್ಟೆ ಹುಣ್ಣಾಗುವಷ್ಟು ಬಿದ್ದು ಬಿದ್ದು ನಕ್ಕು ಬಿಟ್ಟಿತು.

ರಾಕ್ಷಸ ಇಲ್ಲವಾಗಿ, ಸರ್ಪ ಇಲ್ಲವಾಗಿ, ಕಡೆಗೆ ಕೇವಲ ಒಂದೇ ಒಂದು ಕೊಂಡಿಯಿಲ್ಲದ ಚೇಳಿನ ಮರಿ ಯಾಗಿಬಿಟ್ಟಿತು—ಎಲ್ಲರನ್ನೂ ಅಂಜಿಸಿದ ಆ ಭೂತ. ಆದ ರಿಂದ ಆ ನಗು !

ಆ ನಗುವಿಗೆ ಹಕ್ಕಿಗಳು ನಕ್ಕವು. ಮರಗಳು ನಕ್ಕವು ಕಾಡಿಂದ ಕಾಡಿಗೆ ಹರಡಿತು ಆ ನಗು. ದೂರದಲ್ಲಿ ಬೇಟೆ ಯಾಟದಲ್ಲಿದ್ದ ಮಹಾರಾಜರು ಆ ಮಹಾ ನಗುವಿನ ಮಹಾಧ್ವನಿವನ್ನು ಕೇಳಿ ಅರಮನೆಗೆ ಹಿಂತಿರುಗಿದರು.

ಆ ವೇಳೆಗೆ ಪುಟ್ಟರಸರು ಜರಿದಾರದ ತುದಿಯ ಲ್ಲಿದ್ದ ಚೇಳಿನ ಮರಿಯನ್ನು ಹಿಡಿದುಕೊಂಡು ಅರಮನೆಯ ಚಿನ್ನದಮೆಟ್ಟಲಲ್ಲಿ ನಿಂತು ನಗುತ್ತಿದ್ದರು.

ಆಗ ಸೂರ್ಯ ನೆತ್ತಿಯಮೇಲೆ ಬಂದಿದ್ದನು. ನೆರಳುಗಳೆಲ್ಲ ಮರಗಳ ಬುಡದಲ್ಲಿ ನಿಂತಿದ್ದವು. ಹಕ್ಕಿಗ ಳೆಲ್ಲ ಗೂಡುಗಳಿಗೆ ಆಹಾರ ತಂದಿದ್ದವು. ಅಳಿಲುಗಳೆಲ್ಲ ಕಾಯಿಗಳನ್ನು ಹೊರುತ್ತಿದ್ದವು.

ಅರಮನೆಯಲ್ಲಿ—

ಊಟದ ಗಂಟೆ ಬಾರಿಸಿತು.

ಮಹಾಮಂತ್ರಿಯ ಪುತ್ರ ಪುಟ್ಟಮಂತ್ರಿ ಪುಟ್ಟರಸರ ಭಯ ನಿವಾರಣೆ ಮಾಡಿದ್ದಕ್ಕಾಗಿ ಊರಿಗೆಲ್ಲಾ ಔತಣ. ಅಡುಗೆಗಳ ಮಹಾ ವಾಸನೆ !

ನೀವೂ ಬನ್ನಿ !

—:—



# ಹತ್ತಪ್ಪ ಮುತ್ತಪ್ಪ

ಹತ್ತಪ್ಪ ಮುತ್ತಪ್ಪ—ಅಳಿಲುಮರಿಗಳು. ಮಾಗಿದ ಕಾಯಿಗಳನ್ನು ಆರಿಸುತ್ತ ಹೊರಟರು. ಆ ಮರದ ಬುಡ, ಈ ಮರದ ಬುಡ ಹುಡುಕಿ ಹುಡುಕಿ ಪೇರಲ ಕಾಯಿ,ನೇರಿಲ ಕಾಯಿ, ಪನ್ನೇರಿಲಕಾಯಿ ಆರಿಸಿದರು. ಇನ್ನೇನು ಚೀಲತುಂಬಿತು ಸಾಕು ಹೊರಡೋಣ—ಎಂದು ಕೊಂಡು ಹತ್ತಪ್ಪ ಮುತ್ತಪ್ಪ ಹೊರಡಬೇಕು. ಅಷ್ಟು ಹೊತ್ತಿಗೆ ಬಾಲಪ್ಪ ನರಿ ಗದರಿಸಿಕೊಂಡು ಅಲ್ಲಿಗೆ ಬಂತು.

"ಕಟ ಕಟಾಂತ ಹಲ್ಲು ಕಡಿದು ಈ ಕೊಡಲೀಲಿ ಕಚ ಕಚಾಂತ ಕತ್ತರಿಸಿ ಹಾಕೋಣ ಎನ್ನಿಸುತ್ತೆ,

ನಿಮ್ಮಿಬ್ಬರನ್ನು ಕಂಡರೆ! ಈ ಹಲಗೆ ನೋಡಲಿಲ್ಲವೆ? ಈ ಮರದ ಮೇಲೆ ನೇತುಹಾಕಿದೆಯಲ್ಲ—ಈ ಹಲಗೆ! ಅದರಲ್ಲೇನು ಬರೆದು ಇಟ್ಟಿದ್ದೇನೆ ಓದಿಕೊಳ್ಳಿ. ಮೊದಲು ಓದಿ, ಏ ಐಲಪ್ಪಗಳಿರಾ!" ಎಂದು ಕೂಗಿತು ಬಾಲಪ್ಪ ಆ ನರಿ.

ಆಗ ಹತ್ತಪ್ಪ ಮುತ್ತಪ್ಪ ಅಳಿಲುಮರಿಗಳು ಓದಿಕೊಂಡವು.—ಅಲ್ಲಿ ಒಂದು ಮರ. ಆ ಮರಕ್ಕೆ ಒಂದು ಮೊಳೆ ಹೊಡೆದಿತ್ತು. ಆ ಮೊಳೆಗೆ ಒಂದು ಹಲಗೆ ನೇತು ಹಾಕಿತ್ತು. ಆ ಹಲಗೆಯ ಮೇಲೆ ಹೀಗೆ ಬರೆದಿತ್ತು

**ಈ ತೋಟದೊಳಕ್ಕೆ ಯಾರೂ ಬರಕೂಡದು.**
**ಹದ್ದುಮೀರಿ ಬಂದವರಿಗೆ ಶಿಕ್ಷೆ**

ಬಾಲಪ್ಪ ನರಿ
ಕಾಡಿನ ಯಜಮಾನ

ಮುತ್ತಪ್ಪ ಓಡಿಹೋಗಿ ಮರದ ಹಿಂದೆ ಮರೆಯಾಗಿ ನಿಂತಿತು. ಬಾಲಪ್ಪ ನರಿ ಹತ್ತಪ್ಪ ಅಳಿಲನ್ನು ತನ್ನ ತೋಟಕ್ಕೆ ಹಿಡಿದುಕೊಂಡು ನಡೆಯಿತು. ಕಾಯಿ ತುಂಬಿದ ಚೀಲ ಬಾಲಪ್ಪನರಿಯ ಕೈ ಸೇರಿತು.

ತೋಟಕ್ಕೆ ಹೋದ ಮೇಲೆ ಬಾಲಪ್ಪನರಿ ಹತ್ತಪ್ಪ ಅಳಿಲಿನ ಕೈಲಿ ಒಂದು ಗುದ್ದಲಿ ಕೊಟ್ಟು "ಲೇ ಅಳಿಲೇ ಇಲ್ಲೆಲ್ಲೋ ಒಂದು ಹಣದ ಕೊಪ್ಪರಿಗೆ ಇದೆ. ಅದರ

ತುಂಬ ಬಂಗಾರದ ನಾಣ್ಯ ಇದೆ. ಗುದ್ದಲಿ ಹಿಡಿದು ಅಗೆ; ಸಾಯಂಕಾಲದವರೆಗೆ ಅಗೆ! ಕಾಯಿಕಿತ್ತೆಯಲ್ಲ ಅದಕ್ಕೆ ಶಿಕ್ಷೆ ನಿನಗೆ. ನೋಡು ಸಂಜೆವರೆಗೂ ಅಗೆದರೆ ನಿನಗರ್ಧ ಹಣ, ನನಗರ್ಧ ಹಣ. ಈ ನಿನ್ನ ಚೀಲದ ಕಾಯಲ್ಲಿ ಅರ್ಧ ನಿನಗೆ, ಅರ್ಧ ನನಗೆ. ಅಗೆಯಪ್ಪಾ ಅಗೆ!"

ಹತ್ತಪ್ಪ ಅಳಿಲು ತೋಟದಲ್ಲೆಲ್ಲ ಅಗೆಯುತ್ತ ಇತ್ತು. ಬಿಸಿಲಿನಿಂದ ಅದರ ಮೈ ಬೆವರಿತು. ಬೊಬ್ಬೆಬಂದು ಕೈ ನೋಯಲಾರಂಭಿಸಿತು. ಕೊಪ್ಪರಿಗೆ ಮಾತ್ರ ಎಲ್ಲೂ ಕಾಣಲಿಲ್ಲ. ಹತ್ತಪ್ಪ ಅಳಿಲಿನ ಮನೆಯಲ್ಲಿ ಅದರ ತಾಯಿ ಇದ್ದಳು. ಇಲ್ಲಿ ಹತ್ತಪ್ಪ ದಣಿದಿದ್ದ, ಅಲ್ಲಿ ಅದರ ತಾಯಿ ಹಸಿದಿದ್ದಳು.

ಹೀಗಿರುವಾಗ, ತೋಟದ ನಡುವೆ ಒಂದು ಬಾದಾಮಿಮರದ ಬುಡದಲ್ಲಿ ಬಾಲಪ್ಪ ನರಿಯೂ, ಕೂಲಪ್ಪ ನೀರುನಾಯಿಯೂ ಮಾತಾಡುತ್ತ ಕೂತಿದ್ದರು—"ಸುಮ್ಮನಿರು ಕೂಲಪ್ಪ, ಮಂಕು ಅಳಿಲು, ಅದು ಅಗೆಯಲಿ ಚೆನ್ನಾಗಿ. ತೋಟಕ್ಕೆಲ್ಲ ಅಗತೆಯಾಗಲಿ. ಕೊಪ್ಪರಿಗೆಯೂ ಇಲ್ಲ ಗಿಪ್ಪರಿಗೆಯೂ ಇಲ್ಲ ಅಲ್ಲಿ. ಬಲು ಕಾಯಿಕಳ್ಳ ಆ ಅಳಿಲು, ಅಗೆಯಲಿ ಅದು." ನೀರು ನಾಯಿ—"ಅಲ್ಲಿ ಇನ್ನೊಂದಿತ್ತಲ್ಲ ಅಳಿಲು—ಅದೆಲ್ಲಿ ಹೋಯಿತೋ" ಎಂದಿತು. ನರಿ—"ಅದನ್ನೂ ಹಿಡಿದು ತಂದು ಇನ್ನೊಂದು ಕಡೆ ಅಗೆಯಿಸಬೇಕು. ಹಾಗೇ ಆಗ

ಬೇಕು ಕಾಯಿಕದಿಯುವ ಈ ಜನಕ್ಕೆ" ಎಂದಿತು. ಹೀಗೆಂದು ಅವು ತುಂಬಾ ನಕ್ಕವು; ಮತ್ತೂ ನಕ್ಕವು. ಅನಂತರ ಅದನ್ನೇ ಹುಡುಕಿಕೊಂಡು ಬಾಲಪ್ಪ ನರಿ ಹೊರಟಿತು—ಜಾಗುಹಾಕಿಕೊಂಡು ಹೊರಟಿತು

ಈ ವೇಳೆಗೆ ಕಿಲಕಿಲ ಎಂತ ಯಾರೋ ನಕ್ಕ ಹಾಗಾಯಿತು. ಮುತ್ತಪ್ಪ ಅಳಿಲು ಬಾದಾಮಿ ಮರದ ಬುಡದಲ್ಲೇ ಇತ್ತು. ಅದು ಆಕಡೆ ಮರೆಯಾಗಿ ನಿಂತಿತ್ತು. ಇವೆರಡು ಮೋಸಗಾರರೂ ನಗುತ್ತ ಇದ್ದಾಗ ಮುತ್ತಪ್ಪ ಅಳಿಲು ಇವರಿಬ್ಬರ ಮಾತು ಕೇಳುತ್ತ ಸದ್ದು ಮಾಡದೆ ನಿಂತಿತ್ತು. ಬಾಲಪ್ಪ ನರಿ ಆಕಡೆ ಹೊರಟ ಕೂಡಲೆ ಇದು ಈ ಕಡೆ ಮೆಲ್ಲಗೆ ಹೊರಟಿತು. ಹತ್ತಪ್ಪನ ಬಳಿಗೆ ಬಂದೇ ಬಂತು.

ಬಾಲಪ್ಪ ನರಿ ತಾನು ಜಾಗು ಹಾಕಿಕೊಂಡು ಬರುವಾಗ, ಕಿಲಕಿಲ ಶಬ್ದವಾದುದು ಏಕೆ ಎಂದು ಯೋಚಿಸಿತು—"ಓಹೋ ನಂಗೊತ್ತಿಲ್ಲವೆ? ಅದು ಕಡ್ಡೆ ಕೊಳ್ಳಿ ಹಕ್ಕಿ! ಅದು ಯಾವಾಗಲೂ ಬಾದಾಮಿ ಮರದ ಮೇಲೇ ಇರುತ್ತೆ. ಯಾವಾಗಲೂ ಕಿಲಕಿಲ ಎಂದು ಕೂಗುತ್ತಲೇ ಇರುತ್ತೆ!" ಎಂದು ಯೋಚಿಸಿಕೊಂಡು "ಜಗ್ಗು ಜಗ್ಗು" ಎಂತ ಜಾಗು ಹಾಕಿಕೊಂಡು ಹೊರಟಿತು.

ಮುತ್ತಪ್ಪ ಅಳಿಲು ಬಂತು. ಎಲ್ಲಿಗೆ ಬಂತು? ಆ

ಹತ್ತಪ್ಪ ಅಳಿಲು ಅಗೆದೂ ಅಗೆದೂ ಸಾಕಾಗಿತ್ತಲ್ಲ ಅಲ್ಲಿಗೆ. ಕೈ ಬೊಬ್ಬೆ ಬಂದು, ಮೈಸೋತು, ಬೆವರು ಸುರಿದುಹೋಗಿತ್ತಲ್ಲ ಅಲ್ಲಿಗೆ ಮೆಲ್ಲಗೆ ಬಂತು.

ಮುತ್ತಪ್ಪ—" ಹತ್ತಪ್ಪ, ಹತ್ತಪ್ಪ, ಅಗೆದೂ ಅಗೆದೂ ನಿನ್ನ ಮೈಯೆಲ್ಲಾ ಕಾದು, ಬೆವರೆಲ್ಲ ಹರಿದು, ಮಣ್ಣೆಲ್ಲ ಕೆಸರಾಗಿ ಹೋಗಿದೆ. ನಾನೂ ಒಂದಿಷ್ಟು ಅಗೀತೇನೆ ಬಿಡು; ಬಿಡಪ್ಪಾ ಬಿಡು."

ಹತ್ತಪ್ಪ—"ಬೇಡಪ್ಪ ನೀನಿನ್ನೂ ಸಣ್ಣವನು. ನಿನ್ನ ಪುಟ್ಟಾಣಿ ಕೈಲಿ ಇಂಥಾ ಕೆಲಸ ಆಗುಲ್ಲ. ಮನೆಗೆ ಹೋಗಿ ಅಮ್ಮನಿಗೆ ಹೇಳು ಹೀಗೆ.—ನೀನು ಊಟ ಮಾಡಿಬಿಡು. ಸಂಜೆ ಹೊತ್ತಿಗೆ ಅರ್ಧ ಚೀಲ ಕಾಯನ್ನೂ ಇನ್ನರ್ಧ ಚೀಲ ಬಂಗಾರಾನೂ ತರುತ್ತೇನೆ. ಉಪಾಸ ಇರಬೇಡಮ್ಮ —ಎಂತ, ಹೇಳಿಬಿಡು, ಮರಿ.—ಮುತ್ತಪ್ಪ, ಜಾಣಮರಿ, ಹೋಗಮ್ಮಾ ಜಾಣ! ಎಲ್ಲಿ, ಹೊರಟೋಗಿಬಿಟ್ಟೆಯಾ, ಮಾಯವಾಗಿ ಬಿಟ್ಟೆಯಾ! ಕಣ್ಣು ಬಿಡಲಾ?"

ಮುತ್ತಪ್ಪ—" ಇಲ್ಲೆಲ್ಲೊ ಕೊಪ್ಪರಿಗೆ ಹಣ ಇದ್ದೇ ಇದೇ-ಎಂತ ನೀನು ಅಗೀತಾ ಇದ್ದೀಯಾ? ಇಲ್ಲೆಲ್ಲೂ ಕೊಪ್ಪರಿಗೆ ಗಿಪ್ಪರಿಗೆ ಇಲ್ಲವಂತೆ. ಬಾಲಪ್ಪ ನರಿ ಕೂಲಪ್ಪ ನೀರುನಾಯಿ ಕೂತುಕೊಂಡು ಬಾದಾಮಿ ಮರದಬಳಿ ಮಾತಾಡುತ್ತಾ ಇದ್ದರು.—ನಾವಿಬ್ಬರೂ ಕಳ್ಳರಂತೆ, ಕಾಯಿ ಕಳ್ಳರಂತೆ! ನಮ್ಮನ್ನು ಬಿಟ್ಟೆ ಹಿಡಿದು

ನಮ್ಮ ಕೈಲಿ ಈ ತೋಟದಲ್ಲೆಲ್ಲ ಅಗತೆ ಮಾಡಿಸುತ್ತಾ
ರಂತೆ. ಅವರ ಉಪಾಯ ನೋಡಿದೆಯ!—ಇಲ್ಲಿ ಕೊಪ್ಪ
ರಿಗೆ ಹಣ ಎಲ್ಲಿ ಬರುತ್ತೆ? ಕಾಯಿಚೀಲ ಇಲ್ಲದಿದ್ದರೆ
ಅಷ್ಟೇ ಹೋಯಿತು. ನಡೀ ಮನೆಗೆ. ಅಮ್ಮ ಕಾದಿದ್ದಾಳೆ."

ಹತ್ತಪ್ಪ—"ಓಹೋ! ಅದಕ್ಕೇ ಅವರಿಬ್ಬರೂ
ನಗುತ್ತ ಇದ್ದರೇನು ? ಈ ಮರಗಳ ಕಾಯಿಗಳೇ ಬೇಡ
ನಮಗೆ. ಬೇರೆ ಎಲ್ಲಾದರೂ ಹೋದರಾಯಿತು. ದೇವರು
ಇನ್ನೆಲ್ಲಾದರೂ ಮರಗಳನ್ನು ತೋರಿಸಿಯೇ ತೋರಿಸು
ತ್ತಾನೆ. ಕಾಯಿ ಸಿಕ್ಕಿಯೇ ಸಿಕ್ಕುತ್ತೆ! ಆದರೆ...."

ಮುತ್ತಪ್ಪ-"ಆದರೆ ಅವರಿಬ್ಬರೂ ತುಂಬಾ
ನಗುತ್ತಾ ಇದ್ದರಣ್ಣ! ಅವರಿಬ್ಬರೂ ಮೋಸಗಾರರು!
ಬಂಗಾರ ಇದೆ ಎಂತ ಹೇಳಿ ನಾವು ಅಗೆದೂ ಅಗೆದೂ
ಬೆವರು ಸುರಿಸುತ್ತಾ ಇದ್ದರೆ ಅವರಿಬ್ಬರೂ ನಗುತ್ತಾ
ಇದ್ದರು. ಅವರಿಬ್ಬರೂ ಹೊಟ್ಟೆಬಡಿದುಕೊಂಡು
ನಗುತ್ತಾ ಇದ್ದರು! ಯಾಕಣ್ಣ ಹೇಳು!"

ಮುತ್ತಪ್ಪ ಅಳಿಲನ್ನು ಅಲ್ಲೇ ಇರಹೇಳಿ, ಹತ್ತಪ್ಪ
ಅಳಿಲು ಹೊರಟಿತು ತನ್ನ ಮನೆಗೆ. ಅಲ್ಲಿ ತಾಯಿ ಅಳಿಲಿನ
ಸಂಗಡ ಈ ವಿಚಾರವನ್ನೆಲ್ಲ ಹೇಳಿಕೊಂಡಿತು. ತಾಯಿ
ಮಗ ಇಬ್ಬರೂ ಸೇರಿ ಒಂದು ಉಪಾಯ ಹೂಡಿದರು.
ಅದೇನು ಉಪಾಯವೆಂದು ನಾನೀಗ ಹೇಳುವುದಿಲ್ಲ.
ನೀನೇ ಕಂಡು ಹಿಡಿ!

ಸಂಜೆ ಆಗುತ್ತ ಬಂತು. ಹತ್ತಪ್ಪ ಸೋತು ಹೋಗಿದ್ದ. ಅಗೆದೂ ಅಗೆದೂ ಸೋತೇ ಹೋಗಿದ್ದ; ಬೆವರೀ ಬೆವರಿ ಸುಸ್ತಾಗಿ ಹೋಗಿದ್ದ. ಮುತ್ತಪ್ಪ ಹೋಗಿ ಬಾಲಪ್ಪ ನರಿಯನ್ನು ಕರೆದುಕೊಂಡು ಬಂತು. ಬಾಲಪ್ಪ ನರಿ ಹಾದಿಯಲ್ಲಿ ಹೆಜ್ಜೆ ಹೆಜ್ಜೆಗೂ ರೇಗಿ ರೇಗುತ್ತ ಬರುತ್ತಿದ್ದ.

ಬಾಲಪ್ಪ—" ಯಾರೋ ಹೀಗೆಲ್ಲ ಅಗೆಯುವು ದಕ್ಕೆ ಹೇಳಿದವರು ? ಯಾಕೊ, ಹೀಗೆ ಅಗೆದಿದ್ದೀರಿ ? ಮುತ್ತಪ್ಪನೇನು ನೀನು ? ಎಲೆ ಚೋಟಣ್ಣ ! ಎಲ್ಲೊ ನಿನ್ನಣ್ಣ ? ತೋಟದ ತುಂಬ ಅಗೀಬೇಕು; ಎಲ್ಲಾ ಕಡೆ ಯಲ್ಲೂ ಅಗೀರಿ—ಎಂದರೆ ಹತ್ತಿಪ್ಪತ್ತು ಬಾವೀನೆ ತೆಗೆದು ಬಿಟ್ಟಿದ್ದೀರಲ್ಲ ! ಯಾರೋ ಹೇಳಿದೋರು ಹೀಗೆಲ್ಲ ಗುಂಡಿ ಗುಂಡಿ ಮಾಡುವುದಕ್ಕೆ ? ಮುತ್ತಪ್ಪಾ ಲೇ ಮುತ್ತಪ್ಪಾ ! ಯಾರಾದರೂ ಗುಂಡಿಯಲ್ಲಿ ಮೊಗಚಿ ಕೊಂಡರೇನು ಗತಿ ! ಹಾಂ! "

ಮುತ್ತಪ್ಪ—" ನಮ್ಮ ಕಾಯಿಚೀಲ ಬೇಕಾದರೆ ನೀನೇ ಇಟ್ಟುಕೊ ಏ ಬಾಲಪ್ಪ! ನಿನ್ನ ತೋಟದ ಅಗತೆ ಮಾಡುವುದಕ್ಕೆ ನಾನೇನು ಬರಲಿಲ್ಲ. ಇಲ್ಲೆಲ್ಲೊ ಖಣ್ ಖಣ್ ಶಬ್ದ ಆಯಿತು ಎಂತ ಅಗೆದು ನೋಡಿದೆ. ನಾಲ್ಕೈದು ಕಡೆ ಅಗೆದಿದ್ದಾಯಿತು. ಒಂದು ಕಡೆ...."

ಬಾಲಪ್ಪ—" ಹೇಳಿಬಿಡು. ಹೇಳು ಹೇಳು !

ಒಂದು ಕಡೆ ಏನಾಯಿತು. ಏನಾದರೂ ಸಿಕ್ಕಿತ್ತೇನು ? ಹೇಳಪ್ಪ....ಎಲ್ಲಿ ತೋರಿಸಪ್ಪ ! ಜಾಣಪ್ಪ ನಮ್ಮ ಮುತ್ತಪ್ಪ, ಅಳಿಲಪ್ಪ. ಎಂಥಾ ಜಾಣ !"

ಮುತ್ತಪ್ಪ—" ನಿನ್ನ ಕೆಲಸ ಆಗಬೇಕಾದರೆ ಹೇಗೆ ಮಾತಾಡುತ್ತೀಯೆ ಬಾಲಪ್ಪ ನರಿಯೆ! ಆಗಲಿ ಬಾ ತೋರಿಸುತ್ತೇನೆ. ಅದು ಮಾತ್ರ ಭಾರಿ ಪೆಟ್ಟಿಗೆ, ಬಹಳ ಹಿಂದಿನ ಕಾಲದ್ದು. ಅದರ ತುಂಬ ಏನಿದೆ ಗೊತ್ತೊ ?

ಬಾಲಪ್ಪ—" ಏನೇನಿದೆ...."

ಮುತ್ತಪ್ಪ—" ನಾನು ಪೆಟ್ಟಿಗೆ ಮುಚ್ಚಳಾನ ತೆಗೆದಿಲ್ಲವಲ್ಲ. ಅದು ತುಂಬ ಭಾರ. ಅದರೊಳಗೆ ಇರಬಹುದು ನೋಡು—ವಜ್ರ ವೈಢೂರ್ಯ, ಮಾಣಿಕ್ಯ, ಪಚ್ಚೆ, ನೀಲ...."

ಬಾಲಪ್ಪ—" ಕೂಗಬಾರದು! ಮೆಲ್ಲಗೆ ಹೇಳು."

ಮುತ್ತಪ್ಪ—" ಅಷ್ಟೇ ! ಇನ್ನೂ ಏನೇನೋ ಭಾರವಾದ್ದು ಇರಬಹುದು. ಹೋಗು, ಬೇಗ ಹೋಗಿ ಕೂಲಪ್ಪ ನೀರುನಾಯಿ, ನಿನ್ನ ಸ್ನೇಹಿತ ಇದ್ದಾನಲ್ಲ, ಅವನನ್ನು ಕರೆದುಕೊಂಡು ಬಾ. ನೀವಿಬ್ಬರೂ ಸೇರಿ ಪೆಟ್ಟಿಗೆ ಮೇಲಕ್ಕೆ ಎತ್ತಿ ಬಾಯಿ ತೆಗೆದಮೇಲೆ ನಮಗೆಲ್ಲ ಒಂದಿಷ್ಟು ವಜ್ರ ವೈಢೂರ್ಯ ಕೊಡು. ಇಲ್ಲಿ ಬಾ ನೋಡಿಲ್ಲಿ, ಈ ಗುಂಡಿಯಲ್ಲಿ ಆ ಪೆಟ್ಟಿಗೆ ಇದೆ. ಆದರೆ, ನೀನು ಹೋಗುವುದಕ್ಕೆ ಮೊದಲು, ನಮಗೆ ಒಂದಿಷ್ಟು

ಬಾದಾಮಿ ಕಾಯಿ, ಇನ್ನೊಂದಿಷ್ಟು ಖರ್ಜೂರ ಕೊಡು. ಇಲ್ಲ ನಾವೇ ಕಿತ್ತುಕೊಳ್ಳೋಣವೊ?...."

ಬಾಲಪ್ಪ ನರಿ ಎದುರಿಗೇ ನಿಂತಿತ್ತು. ಮುತ್ತಪ್ಪ ಅಳಿಲು ಪುಣಪುಣನೆ ಮರ ಹತ್ತಿ ಬಾದಾಮಿ ಮತ್ತು ಖರ್ಜೂರಗಳನ್ನೆಲ್ಲ ಪಟಪಟ ಉದುರಿಸಿತು. ಅವೆರಡೂ ಸೇರಿ ಚೀಲ ತುಂಬಿಸಿದವು. ಮತ್ತೆ ಅವೆರಡೂ ಅಳಿಲುಗಳು ಆ ಕಾಯಿಚೀಲವನ್ನು ಹೊತ್ತುಕೊಂಡು ಹೊರಟು —ಹೀಗೆ ಹೇಳಿದವು–"ನೋಡಿಕೊಳ್ಳೋ ಬಾಲಪ್ಪ ನಿನ್ನ ತೋಟಾನ. ನಿನ್ನ ಗುಂಡಿ ಅಲ್ಲೇ ಇದೆ. ಅದರೊಳಗೆ ಇರುವುದಂತೂ ಇದ್ದೇ ಇದೆ."

ಸ್ವಲ್ಪ ದೂರ ಹೋದಮೇಲೆ, ಮುತ್ತಪ್ಪ ಅಳಿಲು ಹೇಳಿತು–ಬಾಲಪ್ಪನರಿಗೂ ಕೇಳುವಂತೆ-" ನಿನ್ನ ಗುಂಡಿ ನಿನ್ನ ಮಣ್ಣು, ನಿನ್ನ ಕಲ್ಲು ನಿನ್ನ ಮರ, ಎಲ್ಲಾ ಅಲ್ಲೇ ಇವೆಯೋ?'' ಹೀಗೆ ಹೇಳಿದ್ದೇ ಹೇಳಿದ್ದೂ ಎರಡು ಅಳಿಲುಗಳೂ ತಮ್ಮ ಮನೆಗೆ ಓಡಿಬಂದವು.

ಅಳಿಲಮ್ಮ ಕಾದಿದ್ದಳು ಮನೇಲಿ ಅಲ್ಲವೆ! ಆದ್ದರಿಂದ ಅವು ಸರಸರ ಎಂತ ಕಣ್ಣು, ಕಿವಿ, ತುಟಿ, ಹಲ್ಲು, ಹಣೆ—ಎಲ್ಲ ತೊಳೆದುಕೊಂಡವು. ಎಲ್ಲ ಒಟ್ಟಿಗೆ-ಊಟಕ್ಕೆ ಕೂತುಕೊಂಡವು. ಕಟ ಕಟ, ಕರ ಕರ, ಕರು ಕುರಂ—ಅಂತ ಶಬ್ದವಾಗಲಾರಂಭಿಸಿತು. ಈ ಶಬ್ದಗಳ ನಡುವೆ ಹೊರಗಿನ ಯಾವ ಶಬ್ದವೂ ಕೇಳಲೇ ಇಲ್ಲ.

ಹೊರಗಡೆ ಏನಾದರೂ ಶಬ್ದ ಬರುತ್ತ ಇತ್ತೇನು ? ಹೌದು, ಇತ್ತು. ಬಾಲಪ್ಪನ ಮನೆಯಿಂದ ಬರುತ್ತಾ ಇತ್ತು ಶಬ್ದ—ಕರ್, ಕಯ್, ಕಿಚ್, ಕೀಚ್, ಕಟ್, ಕಠಾರ್-ಎಂತ, ತುಂಬಾ ಶಬ್ದಗಳು ಕೇಳಿ ಬರುತ್ತಿದ್ದವು. ಅದೇನು ಅಂಥಾ ಶಬ್ದ ಎನ್ನುತ್ತೀರೋ ?

ಬಾಲಪ್ಪ ನರಿಯೂ, ಕೂಲಪ್ಪ ನೀರುನಾಯಿಯೂ ತೋಟಕ್ಕೆ ಹೋಗಿ ಆ ಪೆಟ್ಟಿಗೆಯನ್ನ ಹೊರಲಾರದೆ ಹೊತ್ತುಕೊಂಡು ಬಂದಿದ್ದರು. ಅದೊಂದು ಹಳೆಯ ಪೆಟ್ಟಿಗೆ. ಅದರಲ್ಲಿ ಏನೇನಿರಬಹುದು ಎಂದು ಊಹಿಸಿದರು. ಆರು ಕಡೇನೂ ಉರುಳಿಸಿ ನೋಡಿದರು—ಒಂದು ಕಡೆ ಮಾತ್ರ ಇದ್ದಿಲಲ್ಲಿ ಬರೆದಿತ್ತು—"ನವರತ್ನಗಳು—ಎಚ್ಚರಿಕೆ."—ನವರತ್ನಗಳಾದರೆ ಹುಷಾರಾಗಿ ತೆಗೆಯೋಣ—ಎಂದು ಅವರಿಬ್ಬರು ಸ್ನೇಹಿತರೂ ಸೇರಿ ಇಕ್ಕುಳ ಹಾಕಿ ಮೊಳೆ ಕಿತ್ತು ಹಲಗೇನೆಲ್ಲ ತೆಗೆದರು. ಹರಕು ಪರಕು ಬಟ್ಟೆ ಕಾಗದ ಮೊದಲಾದ್ದೆಲ್ಲ ತೆಗೆದು ತೆಗೆದು ಕಿತ್ತು ಕಿತ್ತು ನೋಡಿದರು. ಆದರೆ, ಅಲ್ಲೇನಿತ್ತು !

ಅದರ ತುಂಬಾ ಇತ್ತು ಬೆಣಚು ಕಲ್ಲುಗಳು !

ಬಾಲಪ್ಪ ನರಿಯೂ, ಕೂಲಪ್ಪ ನೀರು ನಾಯಿಯೂ ಕಲ್ಲುಗಳನ್ನೆಲ್ಲ ಕೆಳಗೆ ಸುರಿದು, ತಲೆಯ ಮೇಲೆ ಕೈಯಿಟ್ಟುಕೊಂಡು ಉಸ್ಸಪ್ಪಾ ಎಂದು ಕುಳಿತು ಕೊಂಡರು.

ಈ ಕಡೆ ಹತ್ತಪ್ಪ ಅಳಿಲೂ, ಮುತ್ತಪ್ಪ ಅಳಿಲೂ ಆ ದಿನದ ಕತೆ ಹೇಳುತ್ತ, ಕಾಯಿ ಕಡಿಯುತ್ತಾ, ನಗು ನಗುತ್ತಾ ಇದ್ದವು. ಮಕ್ಕಳ ಜಾಣತನ ನೋಡಿ ತಾಯಿ ಅಳಿಲು ಸಂತೋಷದಿಂದ ಒಂದೊಂದಾಗಿ ಕಾಯಿಗಳನ್ನು ಆರಿಸಿಕೊಂಡು ಕಡಿಕಡಿದು ತಿನ್ನುತ್ತಾ ಇತ್ತು.

"ನೇರಿಳೆ ಒಗರು, ಖರ್ಜೂರ ಸಿಹಿ, ಆದರೆ —ಆ ನರಿಸಹವಾಸವಂತೂ ಬಹಳ ಕಹಿ, ಬಹಳ ಕಹಿ! ಅಲ್ಲಿಗೆ ಇನ್ನು ಹೋಗಬೇಡಿರಪ್ಪ"—ಎಂದಿತು ಆ ತಾಯಿ ಅಳಿಲು.

———



# ಗಂಗಾಮಾಯಿ

೧

ಅವಳಿಗೆ ತುಂಬ ಚೆನ್ನಾಗಿ ಕುದುರೆ ಸವಾರಿ ಬರು ತ್ತಿತ್ತು. ಅವಳ ತಂದೆ ತಾಯಿಯರನ್ನು ಆ ಶತ್ರುಗಳು ಕೊಂದಮೇಲೆ—ಎಲ್ಲಿದ್ದರೇನು ಎಂದುಕೊಂಡು ತನ್ನೂ ರನ್ನು ಹಾಳುಮಾಡಿದ ಶತ್ರುಗಳ ಸಂಗಡಲೇ ಹೊರಟು ಬಂದುಬಿಟ್ಟಳು. ಅವಳು ಸಾಕಿದ್ದ ಮರಿಕುದುರೆ ಹಿಂದೆಯೇ ಬಂದುಬಿಟ್ಟಿತು. ಏನೋ ಪೋರಿ! ಬಂದರೆ ಬರಲೇಳಿ-ಎಂದು ಶತ್ರುಗಳು ಕೂಡ ಅವಳೊಡನೆ ಅದನ್ನು ಕರೆದುಕೊಂಡು ಬಂದರು.

ಬೇರೆಯುವರಂತೆ ಇವಳನ್ನೂ ಹಿಂಗೈ ಹೆಡಮುರಿಗೆ ಕಟ್ಟಿ ನದಿಯಲ್ಲಿ ಹಾಕಲಿಲ್ಲ. ಈ ಹುಡುಗಿಯ ಬಿಡು ಗಣ್ಣ ನೋಟಕ್ಕೆ ಶತ್ರುಗಳು ಮರುಳಾದರು. ಅವಳ ಕೆನ್ನೆಯ ಕೆಂಪಿಗಾಗಿ, ಅವಳ ಮಾತಿನ ಗತ್ತಿಗಾಗಿ ಮೆಚ್ಚಿ

ಕರೆತಂದರು. ಆಗ ಊರು ಊರನ್ನು ದ್ವೇಷಿಸುವ ಕಾಲ. ಊರು ಊರಮೇಲೆ ದಂಡೆತ್ತಿ ಹೋಗಿ ಕೊಳ್ಳೆ ಹೊಡೆಯುವ ಕಾಲ.

ಅವಳ ಹೆಸರು ಗಂಗೆ. ಆರು ವರ್ಷದ ಗಂಗೆ ಹೊಸ ಊರಲ್ಲಿ ಹದಿನಾರು ವರ್ಷದ ಗಂಗೆಯಾಗಿ ಬೆಳೆದಳು. ಊರಲ್ಲಿ ಎಲ್ಲರಿಗೂ ಅಚ್ಚುಮೆಚ್ಚಾದಳು. ಊರಿನ ದೇವಾಲಯದ ಪಕ್ಕದಲ್ಲಿ ತನಗೊಂದು ಪುಟ್ಟ ಗುಡಿಸಲನ್ನು ಕಟ್ಟಿಸಿಕೊಂಡಳು. ತನ್ನ ಕುದುರೆಯನ್ನು ತನ್ನ ಸಂಗಡಲೇ ಇರಿಸಿಕೊಂಡಿದ್ದಳು. ದಿನಕ್ಕೊಮ್ಮೆಯಾದರೂ ಅದರ ಬೆನ್ನಮೇಲೇರಿ ಊರಸುತ್ತ ತಿರುಗಲೇಬೇಕು; ತನ್ನೂರ ಹಾದಿಯಲ್ಲಿ ನಾಲ್ಕು ಹೆಜ್ಜೆ ಹೋಗಲೇಬೇಕು. ಈ ರೀತಿಯ ಜೀವನದಿಂದಲೂ, ಬೆವರಿಳಿವ ತನಕ ಕಷ್ಟಪಟ್ಟು ಊರಲ್ಲಿ ಯಾರ ಮನೆಯಲ್ಲಾದರೂ ದುಡಿಯುತ್ತಿದ್ದುದರಿಂದಲೂ ಆಕೆ ಗಟ್ಟಿಮುಟ್ಟಾದ ಆಳಾಗಿ ಬೆಳೆದಳು.

ಊರು ಬಿಟ್ಟು ಹತ್ತು ವರ್ಷವಾದರೂ, ಆಕೆಗೆ ಊರನೆನಪು ಹೋಗಿರಲಿಲ್ಲ. ತನ್ನೂರಿನ ಗುಡಿಗೋಪುರಗಳ, ಕೋಟೆ ಕೊತ್ತಳಗಳ, ಜನಗಳ ಮತ್ತು ವೀರಾಧಿವೀರರ ವರ್ಣನೆಗಳನ್ನು ಭಿಕ್ಷುಕರ ಲಾವಣಿಗಳಲ್ಲಿ ಕೇಳುತ್ತಲೇ ಇದ್ದಳು. ತನ್ನೂರಿನ ಹೆಸರು ಕೇಳಿದರೇ ಅವಳಿಗೆ ಆನಂದ—ಅಲ್ಲಿಗೆ ಹಿಂತಿರುಗುವ ಕಾಲ ಮತ್ತೆ ಬಂದೀತೇ —ಎಂದು ಕಾದಿದ್ದಳು.

ಗಂಗೆಗೆ ಕ್ರಮೇಣ ತನ್ನ ಜನದ ನಡಿಗೆ ಉಡುಗೆ ಮತ್ತು ನಾಜೂಕಾದ ಮಾತು ಸಹ ಮರೆತು ಹೋದವು. ಈಗ ಹೊಸ ಊರಿನ ಜನರ ಹಾಗೆಯೇ ರಾಗವಾಗಿ ಮಾತಾಡುತ್ತಿದ್ದಳು. ಅವರ ಮಕ್ಕಳು ಮರಿಗಳನ್ನೇ ಆಡಿಸಿಕೊಂಡು, ಅಲ್ಲಿನ ಹೆಂಗಸರು ಹುಡುಗರನ್ನೇ ಮಾತಾಡಿಸಿಕೊಂಡು ಅಲ್ಲಿಗೇ ಒಗ್ಗಿಹೋಗಿದ್ದಳು.

೨

ಒಂದು ದಿನ ರಾತ್ರಿ ಈ ಊರಿನ ಜನರು ನೆರೆ ಊರ ಮೇಲೆ ದಾಳಿಮಾಡುವ ವಿಚಾರವನ್ನು ಗುಸುಗುಸುಗುಟ್ಟುತ್ತಿದ್ದರು. ಏನೋ ಹೊಸಹೊಸದಾಗಿ ಸಜ್ಜು ಮಾಡುತ್ತಿದ್ದರು. ಅವರಲ್ಲಿ ಒಬ್ಬಳಾಗಿ ಬೆರೆತು, ಅವರ ಮಾತೆಲ್ಲ ಕೇಳಿಕೊಂಡಳು. ಒಂದು ಅಲ್ಲದ ಮಾತೂ ಆಡಲಿಲ್ಲ. ಆ ದಿನ ತನ್ನ ಗುಡಿಸಲಿಗೆ ತಲಪುವ ವೇಳೆಗೆ ರಾತ್ರಿ ಒಂಬತ್ತು ಗಂಟೆಯಾಗಿತ್ತು.

ಮನೆಗೆ ಬಂದವಳು ಮೊಟ್ಟಮೊದಲು ಕುದುರೆಯುನ್ನು ಬಿಚ್ಚಿ ಊರಾಚೆ ಹೋಗೆಂದು ಅಟ್ಟಿದಳು. ಊರ ಒಳಗೆ ಅವಳು ಕುದುರೆ ಹತ್ತುತ್ತಿರಲಿಲ್ಲ. ಸವಾರಿ ಯಾವಾಗಲೂ ಊರ ಹೊರಗೆ. ಆದುದರಿಂದ ಆ ಕುದುರೆಯನ್ನು ಬಿಚ್ಚಿ—ತಂಗಿ, ಊರಾಚೆ ಕಾದಿರು ಎಂದು ಹೇಳಿ ಬಿಟ್ಟಳು, ಅದು ಮೊದಲು ಮೆಲ್ಲಗೆ ಹೊರಟು, ಹೆಬ್ಬಾಗಿಲ ಬಳಿ ಹಾರಿ ನಾಗಾಲೋಟದಿಂದ ಊರಾಚೆ ಪಾರಾಯಿತು.

ಗಂಗೆ ಕೊಂಚ ಹೊತ್ತು ಕುಳಿತು ಯೋಚಿಸಿದಳು. "ನನ್ನ ಊರಿನ ವಿಚಾರವನ್ನೇ ಮಾತಾಡುತ್ತಿದ್ದಾರೆ. ಏನು ಮಾಡಲಿ! ನಾಳೆ ಬೆಳಗಾಗುವ ವೇಳೆಗೆ ನನ್ನ ಊರಿಗೆ ಮುತ್ತಿಗೆ ಹಾಕುವರಂತೆ. ಹಳೆಯ ದ್ವೇಷವನ್ನು ತಿರುಗಿ ಸಾಧಿಸಿಕೊಳ್ಳುವರಂತೆ. ನಮ್ಮೂರು ಏಳ್ಗೆಯಾದರೆ ಇವರು ತಡೆಯಲಾರರಲ್ಲ. ನಮ್ಮೂರಿನ ಜನ ಒಂದು ಲೋಟ ಹಾಲು ಹೆಚ್ಚಾಗಿ ಕುಡಿದರೆ ಇವರು ಸಹಿಸಲಾರರು. ನಮ್ಮೂರ ಜನ ಒಂದು ಜಾತ್ರೆ ಮಾಡಿ ಜರತಾರಿ ವಸ್ತ್ರ ಧರಿಸಿದರೆ ಇವರಿಗೆ ಅಸೂಯೆ. ಒಂದು ಚೀಲ ಕಾಳು ಹೆಚ್ಚಾಗಿ ಬೆಳೆದು ಮಾರಿದರೆ ಇವರು ಕುದೀತಾರೆ. ನನ್ನ ಊರಿನ ಮೇಲೆ ನಾಳೆ ಬೆಳಗ್ಗೆ ಲಗ್ಗೆ ಹೂಡುವರಂತೆ. ಅಯ್ಯೋ ಇನ್ನೇನು ಗತಿ. ನನ್ನ ಊರಿಗೆ ಈ ಸಮಾಚಾರವನ್ನು ತಿಳಿಸುವವರಾರು. ನಾನೇ ಹೋಗಲೆ, ನಾನೇ ತಿಳಿಸಲೆ! ನಡುವೆ ನದಿಯಿದೆಯಲ್ಲ! ನಾನು ಹೋಗುವುದೇನೋ ಸರಿ. ಆದರೆ ನನಗೆ ಸಹಾಯ ಮಾಡುವವರಾರು? ನನ್ನ ತಾಯೂರಿನ ಕ್ಷೇಮಕ್ಕಾಗಿ ನಾನು ಸತ್ತರೂ ಚಿಂತೆಯಿಲ್ಲ. ದೇವರು ನನಗೆ ನೆರವಾಗಲಿ, ನಾನು ಹೊರಟೆ."—ಹೀಗೆ ನಿರ್ಧರಮಾಡಿಕೊಂಡು ಹೊರಟುಬಿಟ್ಟಳು.

ಹೆಬ್ಬಾಗಿಲಿಗೆ ಹೋದಾಗ ಕಾವಲುಗಾರನು ಬಾಗಿಲು ಹಾಕುವ ಸಮಯ. ಅವನು ಕೇಳಿದನು—

"ಎಲ್ಲಿಗೆ ಹೊರಟೆ ಏ ಪೋರಿ ಗಂಗೆ!" ಅದಕ್ಕವಳು ಹೇಳಿದಳು—"ನನ್ನ ಕುದುರೆಯನ್ನು ನೀನು ಕಾಣಲಿಲ್ಲವೆ? ಅದೆಲ್ಲಿಯೋ ಕೋಟೆಯಾಚೆಗೆ ಹೋಗಿದೆಯೊ ಏನೋ! ನೋಡಿಕೊಂಡುಬರುತ್ತೇನೆ." ಕಾವಲುಗಾರನು ಬೇಗ ಬಾ ಎಂದು ಹೇಳಿ ಬಾಗಿಲು ಅರೆಕದ ಮಾಡಿದನು. ಕೊಂಚ ಹೊತ್ತಿನಮೇಲೆ ಇನ್ನೊಬ್ಬ ಕಾವಲುಗಾರನು ತನ್ನ ಸರದಿಯಮೇಲೆ ಬಂದು ಕೋಟೆಬಾಗಿಲನ್ನು ಭದ್ರ ಮಾಡಿಬಿಟ್ಟನು.

ಗಂಗೆ ಸುಲಭವಾಗಿ ಊರ ಹೊರಗೆ ನಿಂತಳು. ಇನ್ನು ತನ್ನ ಊರಿಗೆ ಕೇಡುತಾಗದಂತೆ ನೋಡಿಕೊಳ್ಳುವುದೊಂದೇ ಉಳಿಯಿತು. ಅಲ್ಲಿಯೆ ಎದುರಲ್ಲಿ ಒಂದು ಮರದ ಬುಡದಲ್ಲಿ ಕುದುರೆ ಅವಳಿಗಾಗಿ ಕಾದಿತ್ತು.

ಗಂಗೆ ಕುದುರೆಯ ಬಾಯಿಗೆ ದಾಣಿಯ ಚೀಲವನ್ನು ಕಟ್ಟಿ ಅದರ ಕಾಲಬಳಿ ಯೋಚಿಸುತ್ತ ಕುಳಿತಳು. ಅದು ತನ್ನ ತಿಂಡಿಯನ್ನು ತಿನ್ನುವ ಹೊತ್ತಿಗೆ ತನ್ನ ನಿರ್ಧಾರವನ್ನು ಮಾಡಿಕೊಂಡಳು. ಕುದುರೆಯನ್ನು ಹತ್ತಿ ಹೊರಟಳು.

ಗಂಗೆಗೆ ತನ್ನೂರಿನ ದಿಕ್ಕು ಮಾತ್ರ ಗೊತ್ತಿತ್ತು. ಕುದುರೆ ಹೋದ ದಾರಿಗೆ ಅದನ್ನು ಬಿಟ್ಟು ಆಗಾಗ್ಗೆ, ಅದು ಹೋಗುವ ದಿಕ್ಕನ್ನು ಮಾತ್ರ ತಿದ್ದುತ್ತಿದ್ದಳು. ಕಾಡನ್ನು ದಾಟಿ, ಗುಡ್ಡ ಹತ್ತಿ ಇಳಿದು ನದಿಯ ಬಳಿಗೆ ಬರುವ

ವೇಳೆಗೆ ದೂರದಲ್ಲಿ ಗಂಟೆ ಹೊಡೆದ ಸದ್ದು ಕೇಳಿಸಿತು. ನಿಂತು ಎಣಿಸಿದಳು. ಹನ್ನೆರಡಾಯಿತು ಒಟ್ಟು. ಆಗ ಹನ್ನೆರಡಾದರೆ ಇನ್ನುಳಿದ ಐದು ಗಂಟೆಯೊಳಗೆ ತನ್ನ ಊರನ್ನು ತಲಪಬೇಕು, ತಲಪಬಹುದು. ಆದರೆ ಸೇತುವೆಯನ್ನು ಹುಡುಕಿಕೊಂಡು ಹೊರಟರೆ ಬಹಳ ಹೊತ್ತಾದೀತು. ನೇರವಾಗಿ ನದಿಯನ್ನು ದಾಟಿ, ನೇರವಾದ ಹಾದಿಯಲ್ಲಿ ಹೊರಟವೆ ಊರಿಗೆ ಬೇಗ ತಲಪಿ ಎಚ್ಚರಿಕೆ ಕೊಡಬಹುದು. ಊರನ್ನು ಉಳಿಸಬಹುದು. ಆಗಲೇ ತಾನು ಬದುಕಿದ್ದು ಸಾರ್ಥಕ.



ಕುದುರೆ ನದಿಯ ದಡಕ್ಕೆ ಬಂದಿತು. ನದಿ

ತುಂಬಿ ಹರಿಯುತ್ತಿತ್ತು. ಪ್ರವಾಹ ತೀವ್ರವಾಗಿತ್ತು. ಒಣ ಗಿದ ಮರದ ತುಂಡುಗಳು ಕಪ್ಪಕಪ್ಪಗೆ ತೇಲಿಬಂದು ಸುಳಿ ಗಳಲ್ಲಿ ಗಿರ್ರನೆ ತಿರುಗಿ ತಪ್ಪಿಸಿಕೊಂಡು ಮುಂದೆ ಹೋಗುವು ದಕ್ಕೆ ಹೋರಾಡುತ್ತಿದ್ದವು. ದಡದ ಹೆಂಟೆಗಳು ಕುಸಿದು ಬಿದ್ದಲ್ಲಿ ಅಗಾಧ ಶಬ್ದವಾಗಿ ನೊರೆ ಹಾದುತ್ತಿತ್ತು. ಈ ಪ್ರವಾಹದಲ್ಲಿ ಈಜಿ ಹೋಗುವುದು ಹೇಗೆ? ಕುದುರೆಗೆ ಅಷ್ಟೊಂದು ಶಕ್ತಿಯುಂಟೆ? ಈ ದಡದಿಂದ ಹಾರಿಬಿಡ ಬಹುದು. ಆದರೆ ಆ ದಡ ಕಡಿದಾಗಿದೆ. ಅದನ್ನು ಹತ್ತಿ ಹೋಗುವುದೆಂತು?

ಹೆಚ್ಚು ಹೊತ್ತು ನಿಂತು ಯೋಚಿಸುವುದಕ್ಕೆ ಅವ ಕಾಶವಿರಲಿಲ್ಲ. ಆದುದರಿಂದ ಕುದುರೆಯನ್ನು ನೀರಿನೊ ಳಕ್ಕೆ ಹಾರಿಸಿಬಿಟ್ಟಳು. ಆ ಮಾರುಹೊಳೆಯು ಸುಮಾರು ಕಾಲು ಫರ್ಲಾಂಗಿನಷ್ಟೇ ದೂರ ಕಪ್ಪಗೆ ಹರಿಯುತ್ತಿತ್ತು. ಕಾಳಸರ್ಪದಂತೆ ಬುಸುಗುಟ್ಟುತ್ತಿತ್ತು. ಕುದುರೆ ಮುಳು ಗುತ್ತ, ಏಳುತ್ತ, ಸುಳಿಗೆ ಸಿಕ್ಕಿಕೊಳ್ಳುತ್ತ, ತಪ್ಪಿಸಿ ಕೊಳ್ಳುತ್ತ ಅರ್ಧ ದಾರಿಗೆ ಬಂದಿತು. ಅಲ್ಲಿಗೆ ಸರಿಯಾಗಿ ಒಂದು ದೊಡ್ಡ ಮರದ ದಿಮ್ಮಿ ತೇಲಿಬಂತು. ಅದನ್ನು ತಪ್ಪಿಸಿಕೊಳ್ಳುವುದು ಕಷ್ಟವಾಯಿತು. ಕಡೆಗೆ ಕೈಗೆ ಲಗಾ ಮನ್ನು ಬಿಗಿದುಕೊಂಡು ಪ್ರವಾಹದೊಳಕ್ಕೆ ದುಮುಕಿ ಬಿಟ್ಟಳು. ಕುದುರೆಯನ್ನು ಸೆಳೆದುಕೊಂಡು ಮುಂದೆ ಮುಂದೆ ನುಗ್ಗಿ ಹೋಗಿ ಕಡಿದಾದ ದಡವನ್ನು ಹತ್ತಿ

ಹಸುರಮೇಲೆ ಹೊರಟಳು. ಕೊಂಚ ದೂರ ಹೋಗಿ ತಿರುಗಿ ಕುದುರೆಯನ್ನೇರಿದಳು. ಕುದುರೆಗೂ ಆಕೆಯ ಕೆಲಸದ ಗೌರವ ಗೊತ್ತಾಗಿರಬಹುದು. ಆದುದರಿಂದ ಅದು ನೇರವಾಗಿ ಹೊರಟಿತು.

೩

ಒಂದು ಗಂಟೆ ಪ್ರಯಾಣ ಮಾಡಿದಮೇಲೆ ಗಂಗೆಯೂರಿನ ಗೋಪುರದ ದೀಪವು ಕಾಣಿಸಿಕೊಂಡಿತು. ಕುದುರೆಯು ಇನ್ನೂ ವೇಗವಾಗಿ ಹೊರಟಿತು. ನೆಲ ಹಸಿಯಾಗಿ ಹಸುರು ಹುಲ್ಲಿನಿಂದ ಕೂಡಿ ಇದ್ದುದರಿಂದ, ಧೂಳೇಳಲಿಲ್ಲ, ಶಬ್ದವಾಗಲಿಲ್ಲ. ಸ್ವಲ್ಪ ಹೊತ್ತಿನಲ್ಲಿ ಕೋಟೆಯ ಗೋಡೆ ಕಾಣಿಸಿತು. ಕೋಟೆಯ ಬಾಗಿಲು ಕಾಣಿಸಿತು. ನೇರವಾಗಿ ಅಲ್ಲಿಗೆ ತಲಪಿದಳು. ಕುದುರೆಯ ಮೇಲಿಂದಲೆ ಕೂಗಿದಳು—"ಅಯ್ಯಾ ಬಾಗಿಲು ತೆಗೆ!" ಕಾವಲುಗಾರನು ಯಾರು ಎತ್ತ ಏನೆಂದು ವಿಚಾರಿಸಿದನು. ಊರಿನ ಮುಖ್ಯರನ್ನು ಕೂಗಿ ಕರೆದನು. ಎಲ್ಲರೂ ಬಂದರು. ತನಗೆ ಪರಿಚಯವಿದ್ದವರನ್ನು ಕಂಡ ಕೂಡಲೆ ಅವಳು ತನ್ನ ಗುಟ್ಟಿನ ಸಂದೇಶವನ್ನು ಹೇಳಿಬಿಟ್ಟಳು.

ಒಂದು ರೀತಿಯಲ್ಲಿ ಊರಿಗೆಲ್ಲ ಆನಂದ; ಇನ್ನೊಂದು ರೀತಿಯಲ್ಲಿ ಯೋಚನೆ, ಕಷ್ಟ. ಮುಂದೆ ಬರುವ ಯುದ್ಧದಲ್ಲಿ ಶತ್ರುಗಳನ್ನು ಗೆದ್ದುಬಿಟ್ಟರೆ ಸುಖವು ಶಾಶ್ವತ. ನದಿಯಾಚೆಯ ಊರಿನವರು ಮತ್ತೆಂದೂ ಸೈನ್ಯಸಮೇತ ಬರ

ದಂತೆ ಮಾಡುವುದಕ್ಕಾಗಿ ರಾತ್ರಿಯೆಲ್ಲ ಎಚ್ಚರವಾಗಿದ್ದು ಸಿದ್ಧತೆಗಳನ್ನು ಮಾಡಿಕೊಂಡರು. ಹೊಳೆಯಾಚೆಯವರ ನ್ನೆಲ್ಲ ಗಂಗೆ ಬಲ್ಲವಳಾದ್ದರಿಂದ ಸೈನ್ಯದ ನಾಯಕತ್ವವನ್ನು ಗಂಗೆಗೇ ವಹಿಸಿದರು!

ರಾತ್ರಿಯೆಲ್ಲ ದೀಪದ ಬೆಳಕಿನಲ್ಲಿ ಓಡಾಟವಾ ಯಿತು. ಕೋಟೆಕೊತ್ತಳ ಬಾಗಿಲುಗಳನ್ನೆಲ್ಲ ಭದ್ರಮಾಡಿ ದರು. ಲಗ್ಗೆ ಹತ್ತುವವರನ್ನೆಲ್ಲ ಹಿಮ್ಮೆಟ್ಟಿಸುವುದಕ್ಕೆ ಏನೇನು ಬೇಕೋ ಅದನ್ನೆಲ್ಲ ಸಿದ್ಧಮಾಡಿಕೊಂಡರು. ಸಿಡಿ ಯುಂಡೆ, ಉರಿಯುಂಡೆ, ವಿಷಬಾಣ, ಕಠಾರಿ, ಕತ್ತಿ ಭಲ್ಲೆಗಳನ್ನೆಲ್ಲ ಜೋಡಿಸಿಕೊಂಡರು.

ಮಾರನೆಯ ದಿನ ಬೆಳಗಾದ ಎರಡು ಗಂಟೆಗೆ ಹೊಳೆಯಾಚೆ ಊರಿನವರು ಬಂದು ಬಿಟ್ಟರು. ಈಚೆ ಊರಿನವರು ಸಿದ್ಧವಾಗಿರುವದನ್ನು ಅರಿತು ಆಶ್ಚರ್ಯ ಪಟ್ಟರು. ಕೋಟೆಯ ಮುಖ್ಯ ಕೊತ್ತಳದಾಚೆ ಎತ್ತರ ವಾದ ರಣದುರ್ಗದಲ್ಲಿ ತಮಗೆ ಸ್ವಲ್ಪ ಪರಿಚಯವುಳ್ಳ ವ್ಯಕ್ತಿಯಂತಿದ್ದು ರಣಕವಚಧಾರಿಯಾದ ನಾಯಕ ಯೋಧನನ್ನು ಕಂಡು ಸ್ವಲ್ಪ ಬೆಚ್ಚಿದರು. ಅತ್ತ ಕಡೆಗೇ ಬಾಣಗಳನ್ನು ಬಿಟ್ಟರು. ಉರಿಯುಂಡೆಯನ್ನು ಗುರಿ ಯಿಟ್ಟರು. ಯುದ್ಧ ಬಿರುಸಾಗಿ ನಡೆಯಿತು. ಸಿದ್ಧತೆ ಸಾಕಾಗಿರಲಿಲ್ಲ. ಗಂಗೆಯೂರಿನವರು ಸ್ವಲ್ಪ ಹಿಮ್ಮೆಟ್ಟಿದರು. ಹೊರ ಊರಿನವರು ಅಗಳು ದಾಟಿ ಬಂದರು. ಕೋಟೆಯ

ದಿಡ್ಡಿ ಭಾಗಿಲ ಬಳಿ ಗುಂಪಾಗಿ ಅದನ್ನು ಕಬ್ಬಿಣದ ಸುತ್ತಿ ಗೆಗಳಿಂದ ಬಡಿದರು. ಅದರ ಚೌಕಟ್ಟು ಕಳಚಿ ಬೀಳು ವಂತಾಯಿತು. ಆಗ ಗಂಗೆಯು ಹಾರಿ ಬಂದು ಮುಂದೆ ನಿಂತಳು.

ತಾನು ಯಾರೆಂಬುದು ಹೊಳೆಯಾಚೆ ಊರಿನವರಿ ಗೆಲ್ಲ ತಿಳಿಯುವಂತೆ ನಿಂತು ಕಾದಾಡಿದಳು. ಅವಳ ಮುಂದಾಳುತನದಲ್ಲಿ ಊರಿನವರು ವೀರಾವೇಶದಿಂದ ಹೋರಾಡಿದರು. ಎದುರು ಪಕ್ಷದವರು ಅವಳ ಧೈರ್ಯ ಸಾಹಸಗಳಿಗೆ ಹಿಮ್ಮೆಟ್ಟಿ ಅಂಜಿ ಸೋತರು. ಮಧ್ಯಾಹ್ನ ಹನ್ನೆರಡು ಗಂಟೆಯ ಹೊತ್ತಿಗೆ ಸರಿಯಾಗಿ ಯುದ್ಧ ಶಾಂತವಾಯಿತು.

೪

ಊರನ್ನೆಲ್ಲ ಗುಡಿಸಿ, ಊರು ತುಂಬ ತಳಿರು ತೋರಣ ಕಟ್ಟಿ, ವಿಜಯೋತ್ಸವಕ್ಕೆ ಏರ್ಪಡಿಸಿದರು. ಆಗ ಗಂಗೆ ಊರ ಮುಖ್ಯರನ್ನು ತನ್ನ ಬಳಿಗೆ ಕರೆದು, ತನ್ನ ಕಡೆಯ ನಿಮಿಷಗಳು ಸಮೀಪಿಸಿದುವೆಂದು ಹೇಳಿದಳು. ತನ್ನ ಕುದುರೆಯನ್ನು ಬೀಳ್ಕೊಟ್ಟಳು. ನಗುನಗುತ್ತಾ ಪ್ರಾಣಬಿಟ್ಟಳು. ಅವಳಿಗೆ ಯಾವಾಗ ಏಟುಬಿತ್ತೊ ಯಾರೂ ಅರಿಯರು. ಆದರೆ ಇಷ್ಟು ಮಾತ್ರ ನಿಜ!— ಇನ್ನು ಮುಂದೆ, ಆಕೆ ತನಗೆ ಹತ್ತು ವರ್ಷದಿಂದ ಪರಿ ಚಯವಾಗಿದ್ದ ಶತ್ರುಗಳೂರಿಗೆ ಹಿಂತಿರುಗಿ ಹೋಗಿ

ಬಾಳಬೇಕಾಗಿರಲಿಲ್ಲ. ಗೆದ್ದ ಊರಿನಲ್ಲಿ ಹೆಚ್ಚಾಗಿ ಪರಿಚಯವಿರಲಿಲ್ಲ. ಊರೊಟ್ಟಾಗಿ ಅವಳಿಗೆ ತಮ್ಮ ಆಭಾರ ಮನ್ನಣೆ ಮಾಡಿದರು. ಗಂಗೆಯ ಆಯುಸ್ಸು ಅಲ್ಲಿಗೆ ಮುಗಿಯಿತು. ತನ್ನ ಜನ್ಮ ಸಾರ್ಥಕವಾಯಿತೆಂದುಕೊಂಡಳು.

ಈಗಲೂ ಆವೂರಿನಲ್ಲಿ ಗೋಪುರದ ಮುಂಭಾಗದಲ್ಲಿ ಕುದುರೆಯ ಮೇಲೆ ಗಂಗೆಯ ಶಿಲಾಮೂರ್ತಿಯಿದೆ. ಕಾವಲುಗಾರನು ನಿತ್ಯ ಹಗಲಿನಲ್ಲಿ ಹತ್ತು ಗಂಟೆ ಹೊಡೆಯುತ್ತಾನೆ; ಹನ್ನೊಂದು ಗಂಟೆ ಹೊಡೆಯುತ್ತಾನೆ; ಆದರೆ ಹನ್ನೆರಡನ್ನು ಹೊಡೆಯದೆ ಗಂಗಾಮಾಯ್ ಗಂಗಾಮಾಯ್, ಗಂಗಾಮಾಯೀ—ಎಂದು ಗಟ್ಟಿಯಾಗಿ ಕೂಗಿಕೊಳ್ಳುತ್ತಾನೆ. ಮತ್ತೆ ಅಲ್ಲಿಂದ ಮುಂದೆ ಒಂದು ಎರಡು ಗಂಟೆಗಳನ್ನು ನೇರವಾಗಿ ಹೊಡೆಯುತ್ತಾನೆ. ನಡುದಿನದ ಆ ಗಂಟೆಯು ಗಂಗಾಮಾಯಿಯ ನೆನಪಿಗೆ ಮೀಸಲಾಗಿದೆ. ಅದು ಅವಳ ಆತ್ಮಾರ್ಪಣದ ಮುಹೂರ್ತ!

ಆವೂರಿನವರು ಹನ್ನೆರಡು ಗಂಟೆಗೆ ಸರಿಯಾಗಿ ಗೋಪುರದ ಕಡೆಗೆ ತಿರುಗಿ ನಮಸ್ಕಾರ ಮಾಡುವರು. ಆಕೆಯು ಆವೂರಿನ ಭಾಗ್ಯದೇವತೆಯೆಂದೇ ಅವರ ಭಾವನೆ. ಆಕೆ ಭಾಗ್ಯದೇವತೆಯಾಗಿ ಹೊಳೆಯಿಂದಲೇ ಎದ್ದು ಬಂದಳೆಂದು ಅವರ ನಂಬಿಕೆ.

ಹೊಲ ಉಳುವವನು ಆ ವೇಳೆಗೆ ಸರಿಯಾಗಿ ಎತ್ತುಗಳನ್ನು ಬಿಚ್ಚಿ ಬಿಟ್ಟು ತಾನುಣ್ಣುವ ಅನ್ನವನ್ನು ಗೋಪುರ ದೇವಿಯ ಕಡೆಗೆ ಎತ್ತಿ ಹಿಡಿದು, ಗಂಗಾಮಾಯಿ ಗಂಗಾಮಾಯಿ—ಎಂದು ನೈವೇದ್ಯಮಾಡಿ ತಿನ್ನುತ್ತಾನೆ.

ಶಾಲೆಯ ಮಕ್ಕಳು ಪಾಠದ ಮೊದಲು ಗುಂಪುಕೂಡಿ ನಿಂತು ಗಂಗಾಮಾಯಿಯ ಸ್ತೋತ್ರಮಾಡುವರು. ಹೆಣ್ಣು ಮಕ್ಕಳು ಆ ಹೊತ್ತಿಗೆ ಸರಿಯಾಗಿ ದಾರ ತೆಗೆಯಲು ಆರಂಭಿಸುವರು. ವಾರಕ್ಕೊಮ್ಮೆ ತಾವು ತೆಗೆದ ಒಂದು ದಿನದ ದಾರವನ್ನು ಗಂಗಾಮಾಯಿಗೆ ಅರ್ಪಿಸುವರು.

ಗಂಗೆಯ ಪ್ರೇಮ ನಿಃಸ್ವಾರ್ಥಪ್ರೇಮ
ಗಂಗೆಯ ಸೇವೆ ನಿಃಸ್ವಾರ್ಥಸೇವೆ.
ಗಂಗೆಯ ಕೀರ್ತಿ ನಿಶ್ಚಯ, ಶಾಶ್ವತ!

---



# ರುಕ್ಕಿಲಿ ರಂಗಿಲಿ

೧

“ ಒದು ಸಾಕು ಪೇಪರು ಕೆಳಗಿಡೀಂದರೆ. ಅದಷ್ಟು ರೊಟ್ಟಿ ತಿನ್ನಿ. ಇದೊಂದಿಷ್ಟು ಅಂಬಲಿ ಕುಡೀರಿ, ಶಕ್ತಿ ಬರ ಬೇಕೋ ಬೇಡವೊ, ಓಡಾಡಬೇಡವೆ? ಇವತ್ತು ನಮ್ಮಿಬ್ಬರಿಗೆ ಆಹಾರ ತಂದರೆ ಸಾಕು. ಮುಂದಿನ ವಾರದಿಂದ ನಿಮ್ಮ ಮಕ್ಕಳಿಗೆಲ್ಲ ತಿಂಡಿ ತಿನಿಸು ತರಬೇಕು. ರುಚಿ ರುಚಿಯಾದ್ದು ತರಬೇಕು” ಎಂದು ರುಕ್ಕಿಲಿ ಹೇಳಿತು.

ಆಗ ರಂಗಿಲಿ, ಅದರ ಗಂಡ ಕೇಳಿತು. “ಎಷ್ಟು ಜನ ಮಕ್ಕಳು ಅವತಾರಮಾಡುವರು, ಹೆಣ್ಣೆಷ್ಟು ಗಂಡೆಷ್ಟು ? ” ಅದಕ್ಕೆ ಹೆಣ್ಣಿಲಿ ಹೇಳಿತು—“ ನೀವು ಹಾಗೆಂದರೆ ನನಗೆ ರೇಗಿಹೋಗುತ್ತೆ. ದೇವರೇ, ಮಕ್ಕಳ

ಕಳಿಸಪ್ಪ, ನಾವಿಬ್ಬರೇ ಇರಲಾರೆವಪ್ಪಾ, ಎಂತ ನೀವೇ ಬೇಡಿಕೊಂಡಿರಿ. ಆ ದೇವರು ಎಷ್ಟು ಮಂದಿಯನ್ನು ಕಳಿಸುತ್ತಾನೋ ನಾನೇನು ಬಲ್ಲೆ. ಗಂಡಂತೆ–ಹೆಣ್ಣಂತೆ ಸುಮ್ಮನಿರೀಂದ್ರೆ" ಎಂದು ನಾಚಿಕೊಂಡು ಕೂತಿತು ರುಕ್ಕಿಲಿ.

ಆಗ ರಂಗಿಲಿ ಹೇಳಿತು. "ಹೋಗಲಿ ಬಿಡು. ದೇವರು ಎಷ್ಟು ಕೊಟ್ಟರೆ ಅಷ್ಟೇ ಆಗಲಿ. ನಾನು ಈಗ ದೋಣಿಯಲ್ಲಿ ಕೂತು ಸುಗ್ಗಿಹಳ್ಳ ದಾಟಿ ಸುಂಡಿಲಿ ಸಾಮೀಗೆ ಹೇಳಿ ಬರಬೇಕು:—ಒಂದಿಷ್ಟು ರೇಷ್ಮೆ ಸಾಮಾನು ನೋಡಿಕೊಂಡಿರಪ್ಪ—ನಮ್ಮ ಗುಂಪು ಹೆಚ್ಚಾಗುತ್ತಾ ಬರುತ್ತಿದೆ—ಎಂದು". ಹೀಗೆಂದು ಹೇಳಿ ರಂಗಿಲಿ ಕಣ್ಣು ಮೂಗು ಕಿವಿ ಬಾಲ ನೆಕ್ಕಿ ತಿದ್ದಿಕೊಂಡು, ಕಾಲು ಕೈ ಸರಿಮಾಡಿಕೊಂಡು, ಬೆಂಕಿ ಪೊಟ್ಟಣದ ದೋಣಿಯಲ್ಲಿ ಕೂತುಕೊಂಡು ಹೊರಟುಬಿಟ್ಟಿತು.

ರುಕ್ಕಿಲಿ ಬಾಗಿಲವರೆಗೆ ಹೋಗಿ ನಿಂತುಕೊಂಡಿತು. ಗಂಡ ಕಣ್ಣಿಗೆ ಕಾಣುವ ವರೆಗೆ ನಿಂತಿದ್ದು ಒಳಗೆ ಬಂದಿತು. ಊಟದ ಸಾಮಾನುಗಳನ್ನು ಚೊಕ್ಕಟವಾಗಿ ತೊಳೆದು ತೆಗೆದಿಟ್ಟಿತು. ಆಮೇಲೆ ಕಿಟಕಿಯ ಬಳಿಗೆ ಹೋಗಿ ನಿಂತು ನೋಡಿತು. ರಂಗಿಲಿ—ಇದರ ಗಂಡ ಬೆಂಕಿ ಪೊಟ್ಟಣದ ದೋಣಿ ಹತ್ತಿ ಹುಟ್ಟು ಹಾಕುವುದು ದೂರದಲ್ಲಿ ಕಾಣಿಸುತ್ತಿತ್ತು.

ಸ್ವಲ್ಪ ಹೊತ್ತು ನೋಡಿ, ರುಕ್ಕಿಲಿ ಈ ಕಡೆ ಬಂದು ಹಾಸಿಗೆ ಸರಿಮಾಡಿಕೊಂಡು ಮಲಗಿತು. ದಪ್ಪ ಹೊದಿಕೆ ಹೊದೆದುಕೊಂಡು ಮುಖಮಾತ್ರ ಬಿಟ್ಟುಕೊಂಡು ಮಲಗಿತ್ತು. ಮಂಚದ ಮೇಲೆ ಸುಪ್ಪತ್ತಿಗೆ; ಆ ಸುಪ್ಪತ್ತಿಗೆಯ ಮೇಲೆ ರುಕ್ಕಿಲಿ ಮಲಗಿತ್ತು. ಕಿಟಕಿಯ ಬಾಗಿಲು ತೆರೆದಿತ್ತು. ಅದರ ಬಿಳಿಯ ಪರದೆ ಓರೆಯಾಗಿತ್ತು.

ಒಂದು ಪುಸ್ತಕ ಬಿಚ್ಚಿ ರುಕ್ಕಿಲಿ ಸ್ವಲ್ಪ ಓದತೊಡಗಿತು. ಅಷ್ಟರಲ್ಲಿ ತೂಕಡಿಕೆ ಬಂದು ಹಾಗೆಯೆ ಮಲಗಿ ಕಣ್ಣು ಮುಚ್ಚಿತು. ದೀಪ ಸಣ್ಣಗೆ ಉರಿಯುತ್ತಿತ್ತು. ಗಡಿಯಾರ ಟಕಾ ಟಕಾ ಟಕಾ—ಎಂತ ನಡೆಯುತ್ತಿತ್ತು. ಬೆಳ್ಳನೆ ಬೆಳದಿಂಗಳು ಕಿಟಕಿಯಿಂದ ಒಳಕ್ಕೆ ಸೂಸಿ ಹರಿಯುತ್ತ ಇತ್ತು.

೨

ಗಡಿಯಾರ ಒಂದೇ ಒಂದು ಗಂಟೆ ಹೊಡೆಯಿತು. ರುಕ್ಕಿಲಿಗೆ ಎಚ್ಚರವಾಯಿತು. ದೀಪ ಆರಿತ್ತು. ರುಕ್ಕಿಲಿಯ ಗಂಡ ಇನ್ನೂ ಬಂದಿರಲಿಲ್ಲ. ಕಿಟಕಿಯಲ್ಲಿ ಅದೇನೋ ಸದ್ದಾಯಿತು. ರುಕ್ಕಿಲಿ ಆ ಕಡೆ ತಿರುಗಿ ನೋಡಿತು. ಏನೋ ಹೆದರಿಕೆಯಾಗಿ ಪುನಃ ಗೋಡೆಯ ಕಡೆಗೆ ಮುಖ ತಿರುಗಿಸಿಕೊಂಡಿತು. ಹಾಗಾದರೂ ಹೆದರಿಕೆ ತೀರದೆ ಮುಖದ ಮೇಲೆ ಮುಸುಕು ಎಳೆದುಕೊಂಡಿತು.

ರಂಗಿಲಿಯ ದನಿಯಿದ್ದಹಾಗೆ ಸಣ್ಣದೊಂದು

ಕೂಗು ಕೇಳಿಸಿತು. " ಬಾಗಿಲು, ಬಾಗಿಲೂ, ಬಾಗಿಲು ತೆಗೆ." ರುಕ್ಕಲಿ ಕಣ್ಣು ಬಿಟ್ಟು ಕಿಟಕಿಯಲ್ಲಿ ನೋಡಿತು. ಯಾರಿದ್ದರು ಅಲ್ಲಿ? ರಂಗಿಲಿಯೇನಲ್ಲ.—ಗೂಬೆ ಗಂಗು!

ರುಕ್ಕಲಿಗೆ ಬಹಳ ಭಯವಾಯಿತು. ಬಾಗಿಲು ತೆಗೆಯಲೇ ಇಲ್ಲ. ಹಾಗಾದರೂ ಗೂಬೆ ಗಂಗು ಕಿಟಕಿಯಿಂದ ಒಳಗೆ ಬಂತು. ಹೊದಿಕೆ ಹಾರಿಸಿ, ರುಕ್ಕಲಿಯನ್ನು ಬಾಲ ಹಿಡಿದು ಎತ್ತಿಕೊಂಡು ಹೋಯಿತು. ರುಕ್ಕಲಿ ಆ ಗೂಬೆ ಗಂಗು ಕೈಲಿ ಸಿಕ್ಕಿಕೊಂಡಿತು. ಏನು ಅನ್ಯಾಯ!

ನೇತಾಡುತ್ತ ನೇತಾಡುತ್ತ ರುಕ್ಕಲಿ ಹೊರಟಿತ್ತು ಆಕಾಶದಲ್ಲಿ. ಹೊರಟಿತ್ತೆ?—ಪಾಪ, ಅದು ಹೊರಟಿರಲಿಲ್ಲ. ಅದನ್ನು ಆ ಗೂಬೆ ಗಂಗು ಹೊತ್ತುಕೊಂಡು ಹೊರಟಿತ್ತು. ಆ ಗೂಬೆ ಗಂಗು ಸುಮ್ಮನೆ ಹೊರಟಿತ್ತೆ? ಇಲ್ಲ, ಭರಭರಾಟೆಯಿಂದ ಹಾರಿಹೋಗುತ್ತಿತ್ತು.

ಆ ರಾವಣಾಸುರ ಸೀತೆಯನ್ನು ಹೊತ್ತುಕೊಂಡು ಹೋದನಲ್ಲವೆ? ಹಾಗೇನೇ ಈ ರುಕ್ಕಲಿಯನ್ನು ಗೂಬೆ ಗಂಗು ಹೊತ್ತುಕೊಂಡು ಹೊರಟಿತ್ತು. ರುಕ್ಕಲಿ ನಡುನಡುಗುತ್ತ ತಲೆಕೆಳಕಾಗಿ ನೇತಾಡುತ್ತಿತ್ತು.

ಪಾಪ ಪಾ ಆ ಆ ಆಪ್ಪ! ಪಾಪ ಪಾಪ! ರುಕ್ಕಲಿಗೆ ಏನು ಮಾಡಬೇಕೆಂದು ತಿಳಿಯಲಿಲ್ಲ. ಸ್ವಲ್ಪ

ಹೊತ್ತು ಏನೂ ತೋಚದೆ ಕಣ್ಣುಮುಚ್ಚಿಕೊಂಡು ನೇತಾಡುತ್ತಿತ್ತು. ತಲೆಕೆಳಗಾಗಿ ಬಹಳ ಹೊತ್ತು ಇರಲಾರದೆ ಮೇಲೆ ಎದ್ದು ಮುಂಗಾಲುಗಳಿಂದ ಬಾಲವನ್ನು ಹಿಡಿದುಕೊಂಡಿತು. ಪಾಪ, ಹೊಟ್ಟೆಭಾರ, ಇನ್ನೇನು ಮಾಡೀತು !

“ ಭಲಾ ಬಾಲವೆ, ನಿನ್ನಿಂದ ನಾನು ಬದುಕಿದೆ— ಭಲಾ ಬಾಲವೆ ! ” ಎಂದು ತನ್ನ ಬಾಲವನ್ನು ತಾನೇ ಹೊಗಳಿಕೊಂಡಿತು. ಮತ್ತು ನೆಕ್ಕಿನೆಕ್ಕಿ ಉಪಚಾರ ಮಾಡಿತು. ಬಾಲ ಇದ್ದು ಇಲಿ ಬದುಕಿತು ! ಬಾಲದ ಆಸರೆಯಿಂದ ಕುಳಿತು ಕೆಳಗೆ ನೋಡಿದಾಗ ರುಕ್ಕಿಲಿಗೆ ಎರಡು ವಿಚಾರ ಹೊಳೆಯಿತು.

(೧) ಕೆಳಗೆ ನೋಡುತ್ತಾ ಇದ್ದರೆ ಗಂಡ ರಂಗಿಲಿ ಕಂಡಾಗ ಕೂಗಿಕೊಳ್ಳುವುದು.—ಪಾಪ, ಆ ರಂಗಿಲಿಗೆ ಏನು ಗೊತ್ತು ತನ್ನಾಕೆಯ ಆಪತ್ತಿನ ವಿಚಾರ–ಈ ಗೂಬೆ ಗಂಗು ಮಾಡಿದ ದುಷ್ಟ ವಿಚಾರ ! ಇನ್ನೊಬ್ಬರ ಹೆಂಡಿರನ್ನು ಹಿಡಿದು ತಂದ ವಿಚಾರ.

(೨) ಸರಿಯಾದ ಸಮಯ ನೋಡಿ ತಪ್ಪಿಸಿಕೊಳ್ಳುವುದು. ಕೆಳಗೆ ಎಲ್ಲಿ ಬಿದ್ದರೂ ಪರವಾಯಿಲ್ಲ; ಪಾಪಿ ಗಂಗು ಗೂಬೆಯ ಕೊಕ್ಕಿನಿಂದ ತಪ್ಪಿಸಿಕೊಂಡರೆ ಸಾಕು. ನೀರಲ್ಲಿ ನೆಲದಲ್ಲಿ ಎಲ್ಲಿ ಬಿದ್ದರೂ ಚಿಂತೆಯಿಲ್ಲ.—ಹೀಗೆ ಯೋಚಿಸುತ್ತ ಯೋಚಿಸುತ್ತ ಹಿಡಿದ ಬಾಲ ಬಿಟ್ಟು ತಲೆ ಕೆಳಗುಮಾಡಿ ನೋಡಲಾರಂಭಿಸಿತು.

೩

ಈ ವೇಳೆಗೆ ಗೂಬೆಗಂಗು ಭರಭರಾಟೆಯಿಂದ ಮೈಲಿ ಮೈಲಿ ದೂರ ಹಾರಿಹೋಗಿತ್ತು. ತಣ್ಣನೆ ಗಾಳಿ, ತಂಪಾದ ಬೆಳದಿಂಗಳು, ಬಿಡಿ ಬೀಸಾದ ಆಕಾಶ. ಕೆಳಗೆಲ್ಲ ಎಲೆ ತುಂಬಿದ ಮರ, ಹೂ ತುಂಬಿದ ಮರ, ಮತ್ತು ಹಣ್ಣು ತುಂಬಿದ ಮರ; ಅಲ್ಲಲ್ಲಿ ನೀರು: ನದಿಯ ನೀರು, ಕೆರೆಯನೀರು, ಬುಗ್ಗೆಗಳು. ರುಕ್ಕಿಲಿಗೆ ಹೊಲಗಳೂ ಮನೆಗಳೂ ಕಾಣಿಸಿದರೂ ಪ್ರಾಣಿಗಳಾಗಲೀ, ಇಲಿಗಳಾಗಲೀ ಕಾಣಿಸಲೇ ಇಲ್ಲ. ರಂಗಿಲಿಯಂತೂ ಕಣ್ಣಿಗೆ ಬೀಳಲೆ ಇಲ್ಲ. ಆಗ ರುಕ್ಕಿಲಿ ಗಟ್ಟಿಯಾಗಿ ಕಿರಿಚಿಕೊಂಡಿತು.

"ಅಯ್ಯೋ! ಯಾರೂ ಇಲ್ಲವೆ ನನ್ನ ಪಾಲಿಗೆ! ಅಯ್ಯೋ ಕಾಡುಪಾಲಾದೆನೆ! ರಂಗಾ, ರಂಗಾ, ರಂಗಿಲೀ, ರಂಗನಾಥಾ, ನನ್ನರಂಗಾ!" ಆ ಕೂಗು ಕಾಡಿನಲ್ಲೆಲ್ಲ ಮತ್ತೆ ಮತ್ತೆ ಹೊಳಲಿಟ್ಟಿತು.

ಕೂಗಿ ಕೂಗಿ ಸಾಕಾಗಿ, ಅಪಾರ ದುಃಖ ತುಂಬಿ ಬಂದು ರುಕ್ಕಿಲಿಗೆ ಕಣ್ಣೀರು ಹರಿಯಲಾರಂಭಿಸಿತು. ಬಿಸಿ ಬಿಸಿಯಾದ ಕಣ್ಣೀರು ಹನಿಗಳು ಅಲ್ಲೊಂದು ಇಲ್ಲೊಂದು ತೊಟತೊಟ ತೊಟ್‌ತೊಟ್ ಎಂತ ಬೀಳಲಾರಂಭಿಸಿದವು. ಕಾಡಿನ ಮೇಲೆ ನೀರಿನಮೇಲೆ ಹೀಗೆ ಬೀಳುತ್ತ ಬೀಳುತ್ತ ಕಡೆಗೊಂದು ಮುಳ್ಳುಹಂದಿಯ ಮೂಗಿನ ಮೇಲೆ ಬಿತ್ತು, ತೊಟ, ತೊಟ, ತೊಟ-ಒಂದು, ಎರಡು, ಮೂರು!

ಮುಳ್ಳುಹಂದಿಯು ಮೂಗಿನ ಮೇಲೆ
ಮೂರು ಕಣ್ಣೀರು ಬಿತ್ತು, ರಂಗಿಲಿಯ.

ಮುಳ್ಳು ಹಂದಿ ಹಣ್ಣೆಲೆ ರಾಸಿಯುಮೇಲೆ ಮಲಗಿತ್ತು. ಅದಕ್ಕೆ ತಟಕ್ಕನೆ ಎಚ್ಚರವಾಯಿತು. ಅದರ ಮೈಮೇಲಿನ ಮುಳ್ಳೆಲ್ಲ ಎದ್ದು ನಿಂತವು. "ಇದೇನು ಇದೇನು, ಮಳೆನೀರೆ? ಕಣ್ಣೀರೇ! ಬಿಸಿಯಾಗಿದೆಯಲ್ಲ! ಕಣ್ಣೀರೇ ಇರಬೇಕು! ಆಕಾಶದಿಂದ ಕಣ್ಣೀರೇಕೆ ಬೀಳಬೇಕು! ಯಾರದ್ದೀ ಕಣ್ಣೀರು! ಯಾರು ಕಣ್ಣೀರು ಸುರಿಸಿದವರು? ಏನು ಸಂಕಟವೊ! ಆ ಗೂಬೆ ಗಂಗು ಏನಾದರೂ ಮಾಡಿದ್ದಾನೆಯೋ! ಎಲ್ಲಿ ನೋಡೋಣ!"—ಎಂದು ಹಿಂಗಾಲಮೇಲೆ ನಿಂತು ಒಂದು ಗುಟುರು ಹಾಕಿತು. ಮುಳ್ಳು ಹಂದಿಯು ಗಂಟಲಿನಿಂದ ಹೊರಟ ಆ ಕೂಗು ಕಾಡನ್ನು ಸೀಳಿಕೊಂಡು, ಆಕಾಶವನ್ನು ಸೀಳಿಕೊಂಡು, ಮೊದಲು ಗಂಗು ಗೂಬೆಯು ಕಿವಿಗೆ ಬಿತ್ತು. ಆ ಮೇಲೆ ರುಕ್ಕಿಲಿಯ ಕಿವಿಗೂ ಕೇಳಿಸಿತು.

ರುಕ್ಕಿಲಿಗೆ ಕೊಂಚ ಧೈರ್ಯಬಂತು. ಆದರೆ ಆ ಕೂಗು ಕೇಳಿ ಗೂಬೆ ಗಂಗು ಹೆದರಿ ಹೆದರಿ ವೇಗ ವೇಗವಾಗಿ ಹಾರಲಾರಂಭಿಸಿತು. ಆ ಕಾಡಿನಿಂದ ದೂರ ಹಾರಿ ಹೋಗಿಬಿಡೋಣ ಎಂದು ಆ ಗೂಬೆ ಜೋರು ಜೋರಾಗಿ ರೆಕ್ಕೆ ಬೀಸುತ್ತಾ ಹಾರಿಹೋಯಿತು.

೪

ಆ ವೇಳೆಗೆ ಒಂದು ಹಳ್ಳದ ಬಳಿಗೆ ಬಂದಿತು. ಹಳ್ಳದಲ್ಲಿ ರುಕ್ಕಿಲಿಯ ಗಂಡ ರಂಗಿಲಿ! ಒಂದು ದೋಣಿಯಲ್ಲಿ ಹುಟ್ಟುಹಾಕಿಕೊಂಡು ಬೇಗಬೇಗ ಹೋಗುತ್ತಿತ್ತು. ಎಲ್ಲಿಗೊ ?

ದೊಡ್ಡದೊಂದು ಬೆಂಕಿಪೊಟ್ಟಣದಲ್ಲಿ ದೋಣಿಯನ್ನು ಮಾಡಿಕೊಂಡಿತ್ತು. ಎರಡು ಕಡ್ಡಿಗಳಿಂದ ಹುಟ್ಟುಗಳನ್ನು ಮಾಡಿಕೊಂಡಿತ್ತು. ಹೊಸಮಾದರಿ ದೋಣಿ ! ಹೊಸ ರೀತಿಯ ಹುಟ್ಟು !

ಏನೇ ಆಗಲಿ ಆಪತ್ತಿನ ಸಮಯಕ್ಕೆ ಸರಿಯಾಗಿ, ಯಾವುದೋ ಬಗೆಯಿಂದ, ಏನೇ ಕಷ್ಟವಿರಲಿ ನಿಲ್ಲದೆ ಬಂದು ಬಿಟ್ಟಿತ್ತು ರಂಗಿಲಿ. ಮುಳ್ಳುಹಂದಿಮಾವನ ಕೂಗು ಕೇಳಿ ಅದು ಬಂದಿತ್ತು. ಹಳ್ಳದ ನಡುನೀರನ್ನು ದಾಟಿ ಅದು ಕಾಡಿನ ದಡಕ್ಕೆ ಹೋಗುತ್ತಿತ್ತು. ರುಕ್ಕಿಲಿ ಇದನ್ನೆಲ್ಲ ಕಂಡಿತು.

ರುಕ್ಕಿಲಿಗೆ ಧೈರ್ಯ ಬಂತು. ಈ ಗೂಬೆ ಏನು ಮಾಡುತ್ತದೋ ನೋಡೋಣ, ಸತ್ತರೂ ಚಿಂತೆಯಿಲ್ಲ ಎಂದುಕೊಂಡಿತು. ಹೇಗಿದ್ದರೂ ಗಂಡ ರಂಗಿಲಿ ಕೆಳಗೆ ನದಿಯಲ್ಲಿ ಇದ್ದೇ ಇದಾನೆ. ಕಾಡಿನಲ್ಲಂತೂ ಮಾವ ಮುಳ್ಳು ಹಂದಿ ಇದ್ದೇ ಇದಾನೆ. ಹೀಗೆಂದುಕೊಂಡು ರುಕ್ಕಿಲಿ, ಜೀವದಾಸೆಯನ್ನೇ ಬಿಟ್ಟು....

ಮೇಲೆದ್ದು ಗಂಗು ಗೂಬೇ ಕಣ್ಣಿಗೆ
ಒಂದೇಟು ಕೊಟ್ಟು—ಅದರ ಕೊಕ್ಕಿನ
ಡೊಂಕು ತುದಿಗೆ ಇಕ್ಕಿತು ಬಾಯಿ.—

ರುಕ್ಕಲಿಯಂತೂ ಧೈರ್ಯಮಾಡಿತ್ತು. ಗೂಬೆ ಕೈಯಿಂದ ಈ ಬಾರಿ ಪಾರಾದರೆ ಮಕ್ಕಳು, ಮರಿ, ಗಂಡ—ತುಂಬಿದ ಸಂಸಾರ. ಇಲ್ಲವಾದರೆ....ತಾನು ಗೂಬೆಗೆ ಆಹುತಿ, ತನ್ನ ಗಂಡ ನೀರಿಗೆ ಆಹುತಿ. ಆದದ್ದಾಗಲಿ ಎಂದುಕೊಂಡು—ಆದರೆ....

ಕೆಟ್ಟದ್ದೇನೂ ಆಗಲಿಲ್ಲ. ರುಕ್ಕಲಿ ಧೈರ್ಯಮಾಡಿದಳೊ ಇಲ್ಲವೊ ಗಂಗುಗೂಬೆಗೆ ಗಾಬರಿ ಆಯಿತು. ರುಕ್ಕಲಿಯ ಹೊಡೆತದಿಂದ ಗಂಗು ಕೊಕ್ಕು ಸಡಲಿತು. ರುಕ್ಕಲಿಯ ನುಣುಪಾದ ಬಾಲ ಅದರ ಕೊಕ್ಕಿನಿಂದ ಕಳಚಿತು; ರುಕ್ಕಲಿಗೆ ಬಿಡುಗಡೆಯಾಯಿತು. ಅದು ಇಳಿಯಿತು ಇಳಿಯಿತೂ, ಆಕಾಶದಿಂದಭೂಮಿಗೆ ಇಳಿಯಿತು.

ಎಲ್ಲಿ ಬಿತ್ತು ರುಕ್ಕಲಿ? ನದಿಯ ತೀರದಲ್ಲಿ ಒಂದು ಹಣ್ಣೆಲೆ ರಾಶಿಯಮೇಲೆ ಬಿತ್ತು. ಪೆಟ್ಟಾಗಿ ನೋವಾಗಲಿಲ್ಲ. ಮುಳ್ಳುಹಂದಿ ಮಾವ ಆ ಹೊತ್ತಿಗೆ ಸರಿಯಾಗಿ ಅಲ್ಲಿಗೆ ಬಂದಿತ್ತು. ಅದು ರುಕ್ಕಲಿಯನ್ನು ಕಂಡು ಅದರ ಮೈನೆಕ್ಕಿ ಸ್ವಲ್ಪ ಸಮಾಧಾನಪಡಿಸಿತು.

ಅನಂತರ ಆ ರುಕ್ಕಲಿ—"ಅಗೋ ನೋಡು ನನ್ನ ಗಂಡ ದೋಣಿಯಲ್ಲಿ ಬರುತ್ತಿದ್ದಾನೆ. ನೋಡು ಅಲ್ಲಿ

ಮುಳ್ಳುಹಂದಿ ಮಾವ''—ಎಂದು ತೋರಿಸಿತು. ರಂಗಿಲಿ ದೂರದಲ್ಲಿ ಬರುತ್ತ ಇತ್ತು—ತನ್ನ ದೋಣಿಯಲ್ಲಿ !

ಅವೆರಡೂ ಸಧ್ಯ ಕಂಟಕ ಕಳೆಯಿತಲ್ಲ ಎಂದು

ಸಂತೋಷಗೊಂಡು ರಂಗಿಲಿಯು ಕೂಗಿ ಕರೆವಾಗ

ಅಯ್ಯೋ! ಅನಾಹುತವಾಯಿತು!....ಗೂಬೆ ಗಂಗು ಹಾರಿಬಂದು, ಅವರಿಬ್ಬರ ನಡುವೆ ನಿಂತು ಮುಳ್ಳುಹಂದಿ ಮಾವನಿಗೆ ರೆಕ್ಕೆಯಿಂದ ಎರಡೇಟು ಬಿಟ್ಟಿತು; ಕೊಕ್ಕಿನಿಂದ ಅದರ ಮೂತಿಯನ್ನು ಕುಕ್ಕಿತು. ಪಾಪ ಮುಳ್ಳುಹಂದಿಯು ತಲೆಗೆ ಏಟು ಬಿತ್ತು. ಆದರೆ ಮೈಗೆ ಮಾತ್ರ ಏಟು ಬೀಳಲಿಲ್ಲ. ಯಾಕೆಂದರೆ ಅದರ ಮೈ ತುಂಬ ಮುಳ್ಳು. ಗೂಬೆಯ ರೆಕ್ಕೆಗಳಿಗೆ ಅವು ಚುಚ್ಚಿಕೊಂಡವು. ಗೂಬೆ ಮತ್ತೆ ಮತ್ತೆ ರೆಕ್ಕೆ ಎಳೆದು ಬೀಸಿ ಬಡಿದಾಗಲೆಲ್ಲ ಅದರ ಗರಿಗಳು ಉದುರಿಹೋಗುತ್ತಿದ್ದವು.

ಗೂಬೆಗೂ ಮುಳ್ಳುಹಂದಿಗೂ ಯುದ್ಧ ಬಲು ಭಯಂಕರವಾಗಿ ನಡೆಯಿತು. ರುಕ್ಕಿಲಿ ನಡುಗುತ್ತ ನಿಂತಿತ್ತು. ಮುಳ್ಳುಹಂದಿಯು ಮುಳ್ಳುಗಳೂ ಗೂಬೆಯ ಗರಿಗಳೂ ನೆಲದಮೇಲೆ ರಾಸಿರಾಸಿಯಾಗಿ ಬಿದ್ದವು. ಮತ್ತು ಅವುಗಳ ಹೊಡೆದಾಟ ಹಾರಾಟಗಳಿಂದ ಮುಳ್ಳುಗಳೂ ಗರಿಗಳೂ ಆಕಾಶದಲ್ಲೆಲ್ಲ ಹಾರಾಡುತ್ತಿದ್ದವು.

೫

ಹೀಗೆ ಎದ್ದುಬಿದ್ದು ಏದುತ್ತ ಏದುತ್ತಾ ಅವೆರಡೂ

ಹಳ್ಳದ ದಡದಲ್ಲಿ ಯುದ್ಧ ಮಾಡುತ್ತ ಇದ್ದವು. ಆ ವೇಳೆಗೆ ಸರಿಯಾಗಿ ರಂಗಿಲಿ ತನ್ನ ದೋಣಿಯಲ್ಲಿ ದಡದ ಬಳಿಗೆ ಹಾಜರಾಗಿ ಬಂತು ಅದರ ಕೈಲಿ ಒಳ್ಳೆಯ ನೂಲು ಹಗ್ಗವಿತ್ತು, ಅದು ಸುರುಳಿಸುರುಳಿಯಾಗಿತ್ತು. ಅದರ ತುದಿಗೊಂದು ಕುಣಿಕೆಯಿತ್ತು.

ರಂಗಿಲಿ ತನ್ನ ದೋಣಿಯನ್ನ ದಡದ ಬಳಿ ನಿಲ್ಲಿಸಿ, ಎದ್ದುನಿಂತು, ಗುರಿ ನೋಡಿ ಹಗ್ಗದ ಕುಣಿಕೆಯನ್ನು ಬೀಸಿ ಎಸೆಯಿತು. ಆ ಕುಣಿಕೆ ಸೂರ್ಯ್ಯನ ಹೋಗಿ ಗೂಬೆ ಗಂಗುವಿನ ಕೊರಳಿಗೆ ಬಿತ್ತು. ಗೂಬೆ ಕೊಸರಾಡಿತು. ಆಗ ಕುಣಿಕೆ ಬಿಗಿಯಾಯಿತು. ಮೈಗೆಲ್ಲ ಹಗ್ಗ ಸುತ್ತಿ ಕೊಂಡಿತು.

ರಂಗಿಲಿ ಹಗ್ಗವನ್ನು ಎಳೆಯಿತು. ಕಣ್ಣು ಮುಚ್ಚಿ ಕಣ್ಣು ಬಿಡುವುದರೊಳಗೆ ಗೂಬೆ ಗಂಗು ನೀರಲ್ಲಿ ಬಿದ್ದು ಒದ್ದಾಡುತ್ತ ಇತ್ತು. ಮುಳುಮುಳುಗೇಳುತ್ತ ಅದರ ತಲೆ ಒದ್ದೆಯಾಗಿತ್ತು. ಕಣ್ಣು ಮೂಗಿಗೆಲ್ಲ ನೀರು ತುಂಬಿ ಕೊಂಡಿತ್ತು.

ಅಲ್ಲಿಗೇ ಬಿಡದೆ ರಂಗಿಲಿ ಹಗ್ಗವನ್ನು ಇನ್ನೂ ಎಳೆ ಯಿತು. ಎಳೆದಾಗ ಗಂಗು ದೋಣಿಯ ಬಾಡಕ್ಕೇ ಬಂದು ಬಿಟ್ಟಿತು. ಗೂಬೆಯ ಕತ್ತು ಬಿಗಿಯಿತು. ಅದು ಉಪಾಯ ಕಾಣದೆ ರೆಕ್ಕೆಗಳನ್ನು ಬಡಿಯಿತು. ರೆಕ್ಕೆಯ ಏಟಿಗೆ ದೋಣಿ ಮಗುಚಿಕೊಂಡಿತು. ರಂಗಿಲಿಗೆ ಆಗ ಯಾರು ಸಹಾಯ ಮಾಡುವವರು?

ಝುಕ್ಕಲಿ ಅಲ್ಲಿ ದಡದಲ್ಲಿ ಹಣ್ಣೆಲೆ ರಾಶಿಯಮೇಲೆ ನಿಂತಿತ್ತು. ಮುಳ್ಳುಹಂದಿ ಅದರಬಳಿಯೇ ಇತ್ತು. ಇಲ್ಲಿಯ ವರೆಗೆ ಅವೆರಡೂ ಚಪ್ಪಾಳೆ ತಟ್ಟಿಕೊಂಡು ನಗುತ್ತಾ ಇದ್ದವು—"ಹಾಗಾಗಬೇಕು, ರೆಕ್ಕೆ ಮುರಿಬೇಕು, ಕೊಕ್ಕು ಮುರಿಬೇಕು, ನೀರು ಕುಡೀಬೇಕು. ಹಳ್ಳದ ಪಾಲಾ........" ಎಂದು ಅವೆರಡೂ ಹೇಳುತ್ತಿದ್ದವು. ಅಷ್ಟರಲ್ಲೆ ರಂಗಿಲಿ ಕೂಗಿದ್ದು ಕೇಳಿಸಿತು—"ಹೋಯಿತು ದೋಣೀ! ಹೋಯಿತು ನನ್ನಂಗೀ! ಒದ್ದೆಯಾಗಿ ಹೋಯಿತೂ! ಅಯ್ಯೋ ಅಯ್ಯೋ!"

ರುಕ್ಕಲಿ ತನ್ನ ಗಂಡ ನೀರಿನಲ್ಲಿ ಬಿದ್ದನಲ್ಲಾ ಎಂದು ಸಂಕಟಪಟ್ಟುಕೊಂಡು ಹಳ್ಳದ ಬುಡಕ್ಕೆ ಓಡಿಬಂತು. "ಹೀಗೆ ಬನ್ನೀ ಈ ಕಡೆ ಬನ್ನೀ, ಗೂಬೆ ಕೈಗೆ ಸಿಕ್ಕೀರಿ ಜೋಕೆ!" ಎಂದು ಕೂಗುತ್ತ ಹೆದರಿ ನಡುಗುತ್ತ ನಿಂತಿದ್ದಾಗ ಹಳ್ಳದ ದಡ ಕುಸಿದು ಬಿತ್ತು! ರುಕ್ಕಲಿಯೂ ಹಳ್ಳಕ್ಕೆ ಬಿದ್ದುಬಿಟ್ಟಿತು. ಸೀರೆ ಒದ್ದೆಯಾಗಿಬಿಟ್ಟಿತು. ಕಣ್ಣು ಕಿವಿ ಮೂಗು ಮೂರರಲ್ಲೂ ನೀರು ತುಂಬಿಕೊಂಡು, ರುಕ್ಕಲಿ ನೀರಲ್ಲಿ ಒದ್ದಾಡಲಾರಂಭಿಸಿತು.

—"ಅಯ್ಯೋ! ಯಾರೂ ಇಲ್ಲವೆ!'' ಎಂದು ಗಟ್ಟಿಯಾಗಿ ಚೀರಿತು. ಭಯದಿಂದ ಕಣ್ಣುಬಿಟ್ಟು ನೋಡಿದರೆ ಮಂಚದಿಂದ ಕೆಳಕ್ಕೆ ಉರುಳಿಬಿಟ್ಟಿತ್ತು. ಅದರ ಹೊದಿಕೆಯೆಲ್ಲ ಮೈಗೇ ಸುತ್ತಿಕೊಂಡಿತ್ತು.

ಆ ವೇಳೆಗೆ ಸರಿಯಾಗಿ ರಂಗಿಲಿ ಹೊರಗಿನಿಂದ ಬಾಗಿಲು ತಟ್ಟಿತು. "ದಬ ದಬ" ಶಬ್ದ ಕೇಳಿ ರುಕ್ಕಿಲಿ ಹೆದರಿ ಹೆದರಿ ನಡುಗುತ್ತ ಬಾಗಿಲು ತೆಗೆಯಿತು ಕೊಂಚ ಕೊಂಚವಾಗಿ!

ಹೊರಗಿನ ಬೆಳಕು ಇಣಿಕಿತು. ಆಗ "ಅಯ್ಯೋ ಕನಸೆ!" ಅಂದುಕೊಂಡು ನಕ್ಕು ನಕ್ಕು ತನ್ನ ಕನಸನ್ನು ತನ್ನ ಗಂಡ ರಂಗಿಲಿಗೆ ಹೇಳಿತು. ರಂಗಿಲಿಯೂ ತಾನು ಕಂಡದ್ದನ್ನು ಹೇಳಿತು—"ನಾನು ದಾರೀಲಿ ಕಂಡೆ ಕಣೇ, ಗಂಗು ಗೂಬೆ ಯಾಕೊ ಏನೊ ಸತ್ತು ಬಿದ್ದಿತ್ತು. ನಿನ್ನ ಕನಸು ಒಳ್ಳೇದಕ್ಕೇ ಇರಬೇಕು!" ಹೀಗೆಂದು ತಾನು ತಂದ ತಿಂಡಿ ಬಟ್ಟೆ ಸಾಮಾನುಗಳನ್ನೆಲ್ಲಾ ತೋರಿಸಿತು.

ರುಕ್ಕಿಲಿ, ಗಂಡ ತಂದ ಸಾಮಾನೆಲ್ಲವನ್ನೂ ಚೆನ್ನಾಗಿ ಜೋಡಿಸಿ ಇಟ್ಟುಕೊಂಡಿತು. "ಇನ್ನೇನು ದೇವರು ಮಕ್ಕಳನ್ನು ಕೊಡುತ್ತಾನೆ, ಆಗ ಮಕ್ಕಳಿಗೆ ಬೇಕಾದ್ದೆಲ್ಲ ಮಾಡಿಟ್ಟುಕೊಳ್ಳೋಣ!"—ಎಂದು ಎರಡೂ ಸೇರಿ ಸುಖದಿಂದ ಸಂಸಾರಮಾಡುತ್ತಿದ್ದವು.

ರುಕ್ಕಿಲಿ ಮತ್ತು ರಂಗಿಲಿ ಸುಖವಾಗಿವೆ. ಅವಕ್ಕೆ ಮಕ್ಕಳಾದಾಗ ನಾವೂ ಹೋಗಿ, ನೋಡಿ, ಹರಸಿ ಬರೋಣ.

---

# ಅನ್ಪು ಮತ್ತು ಬಾಟ*

೧

ಒಂದಾನೊಂದು ಕಾಲದಲ್ಲಿ ಇಬ್ಬರು ಒಡಹುಟ್ಟಿದವರಿದ್ದರು. ಅವರಿಬ್ಬರೂ ಒಂದೇ ತಾಯಿ ಮತ್ತು ಒಂದೇ ತಂದೆಯ ಮಕ್ಕಳು. ಹಿರಿಯುವನು ' ಅನ್ಪು.' ಕಿರಿಯುವನ ಹೆಸರು ' ಬಾಟ '.

ಅನ್ಪು ಮದುವೆ ಮಾಡಿಕೊಂಡಿದ್ದನು, ಅವನಿಗೊಂದು ಮನೆಯಿತ್ತು. ಬಾಟನು ಅನ್ಪುವಿನ ಸಂಗಡ ಒಂದೇ ಮನೆಯಲ್ಲಿ ವಾಸವಾಗಿದ್ದನು. ಹಿರಿಯುವನು ಕಿರಿಯುವನನ್ನು ಸ್ವಂತ ಮಗನಂತೆ ನೋಡಿಕೊಂಡಿದ್ದನು.

ಬಟ್ಟೆ ನೇಯುವವನು ಬಾಟ, ಹೊಲದಲ್ಲಿ ಉಳುವವನು ಬಾಟ, ಗೋಧಿ ಬಿತ್ತುವವನು ಬಾಟ, ಹಸುಕರುಗಳ ಹಿಂದೆ ಬಾಟ, ಎಲ್ಲ ಕೆಲಸಗಳಿಗೂ ಬಾಟ. ಆ

---

* ಪ್ರಪಂಚದಲ್ಲೆಲ್ಲಾ ಬಹಳ ಹಳೆಯ ಕಥೆಯೆಂದರೆ ಅನ್ಪು–ಬಾಟ ಕಥೆ. ಇದು ಈಜಿಪ್ಟ್ ದೇಶದ ಕಥೆ ಪ್ಯಾಪಿರಸ್ ಕಾಗದದ ಮೇಲೆ ಮೂರು ಸಾವಿರದ ಇನ್ನೂರು ವರ್ಷಗಳ ಹಿಂದೆ ಬರೆದಿಟ್ಟಿರುವ ಕಥೆ. ಸಹಸ್ರಾರು ವರ್ಷಗಳ ಹಿಂದೆ ತಾಯಂದಿರು ಮಕ್ಕಳಿಗೆ ಹೇಳಿದ ಕಥೆ. ಈ ಕಥೆಯು ಕಗಾವು ಎಂಬ ಫೇರೊ ಚಕ್ರವರ್ತಿಯ ಭಂಡಾರದಲ್ಲಿ ಇತ್ತು. ಅದಕ್ಕೆ ಕಾ ಎಂದು ಹೆಸರಿತ್ತು. ಕಾ ಗ್ರಂಥದಿಂದ ಹೋರಾ ಎಂಬ ಗುಮಾಸ್ತನು ಬರೆದಿಟ್ಟನು. ಆ ಹೋರನ ಗ್ರಂಥದಿಂದ ಮಿರಮಾಪಟ ಎಂಬುವನು ಬರೆದಿಟ್ಟುಕೊಂಡನು. ಮಿರಮಾಪಟನ ಗ್ರಂಥದಿಂದ ಅನಿನಾ ಎಂಬುವನು ಬರೆದಿಟ್ಟನು. ಈಗ, ಅನಿನಾ ಬರೆದಿಟ್ಟಿರುವ ಪ್ಯಾಪಿರಸ್ ಗ್ರಂಥದ ಸುರುಳಿ ಸಿಕ್ಕಿದೆ. ಈ ಸುರುಳಿ ಅಲ್ಲಲ್ಲಿ ಮುಗ್ಗಿಹೋಗಿ ಹುಳು ತಿಂದು ಹೋಗಿದೆ. ಅಂತು ಈ ಕಥೆ ಬಹಳ ಹಿಂದಿನ ಕಥೆ.

ದೇಶದಲ್ಲೆಲ್ಲಾ ಬಾಟನಂಥವರು ಇನ್ನಿಲ್ಲ. ದೇವತೆಗಳ ಶಕ್ತಿ ಅವನಲ್ಲಿತ್ತು.

ಒಂದು ದಿನ ಬಾಟ ಎತ್ತುಗಳನ್ನು ಹೊಡೆದು ಕೊಂಡು ಗದ್ದೆಗೆ ಹೋದನು. ಎಂದಿನಂತೆ ಸಂಜೆಯ ವೇಳೆಗೆ ಮನೆಗೆ ಹಿಂತಿರುಗಿದನು. ಸೊಪ್ಪು, ಸದೆ, ಹಾಲು ಹಣ್ಣು, ಕಾಯಿ ಎಲ್ಲಾ ಅಣ್ಣನ ಮುಂದೆ ತಂದಿಟ್ಟನು. ಅಣ್ಣ ಅತ್ತಿಗೆಯ ಸಂಗಡ ಊಟ ಮಾಡಿದನು, ಹಾಲು ಕುಡಿದನು, ರಾತ್ರಿ ಕೊಟ್ಟಿಗೆಯಲ್ಲಿ ದನಗಳ ಹತ್ತಿರ ಮಲಗಿಕೊಂಡನು.

ಬಾಟ ಮಾರನೆಯ ದಿನ ಮುಂಜಾನಿನಲ್ಲಿ ಎದ್ದು ರೊಟ್ಟಿಗಳನ್ನು ಬೇಯಿಸಿದನು. ಅನ್ಪುಗೆ ತಿನ್ನಲಿಕ್ಕೆ ಕೊಟ್ಟನು. ಉಳಿದುದನ್ನು ತಾನು ಕಟ್ಟಿಕೊಂಡು ಹಸು ಗಳ ಹಿಂದೆ ಕಾವಲಿಗೆ ಹೋದನು.

ಇವನು ಮೇಯಿಸುತ್ತಿರುವಾಗ ಅಲ್ಲಿ ಹೋಗಿ ಬರುವವರು ಬೇಲಿಯ ಬಳಿ ನಿಂತು ನೋಡಿ 'ಬಾಟ ಇದ್ದಲ್ಲಿ ಬೆಳೆ ಚೆನ್ನಾಗಿರುತ್ತೆ, ನೆಲವೆಲ್ಲ ನಗುತ್ತೆ' ಎಂದರು. ಬಾಟ ಅವರು ಹೇಳಿದ್ದನ್ನೆಲ್ಲಾ ಕೇಳಿದನು. ಹಸುಗಳು, ಕರುಗಳು ಬೆಳೆದು ಬಲಿತಿದ್ದವು. ಎಲ್ಲೆಲ್ಲೂ ಹಚ್ಚಗೆ ಹಸುರಾಗಿತ್ತು.

'ಬಾಟ, ನೇಗಿಲಿಗೆ ಸರಿಯಾದ ಒಂದು ಜೋಡು ಎತ್ತುಗಳನ್ನು ಆರಿಸಿಡು, ನೆಲವು ನೀರಿನ ಮೇಲೆ ಎದ್ದಿದೆ,

ನೇಗಿಲು. ಹೊಡೆಯುವದಕ್ಕೆ ಇದು ಸರಿಯಾದ ಕಾಲ. ನಾಳೆ ಬಿತ್ತುವ್ರದಕ್ಕೆ ಬೀಜಗಳನ್ನು ಸಹ ತರಬೇಕು ಕಂಡ್ಯಾ' ಹೀಗೆ ಅಪ್ಪು ಹೇಳಿದಂತೆಯೇ ಬಾಟನು ಚಾಚೂ ತಪ್ಪದೆ ಮಾಡಿದನು.

ಬೆಳಗ್ಗೆ ಬಾಟ ಹೊಲಗಳ ಮೇಲೆ ಹೋದನು. ಎತ್ತುಗಳನ್ನು ಹಿಡಿದು ನೇಗಿಲಿಗೆ ಹೂಡಿದನು. ಹೊಲವನ್ನೆಲ್ಲಾ ಉತ್ತನು. ಇನ್ನು ಬೀಜ ಬಿತ್ತುವುದು ಒಂದೆ. ಎಲ್ಲವನ್ನೂ ತಂದ ಬಾಟ ಬೀಜಗಳನ್ನೇ ತಂದಿರಲಿಲ್ಲ. ' ಬೇಗ ಹೋಗು, ಮನೆಯಿಂದ ಬೀಜಗಳನ್ನು ತೆಗೆದು ಕೊಂಡು ಬಾ' ಹೀಗೆ ಅಪ್ಪು ಹೇಳಿದನು, ಬಾಟ ಮನೆಯ ಕಡೆ ಹೊರಟನು.

ಮನೆಯಲ್ಲಿ ಅಣ್ಣ ಅಪ್ಪುವಿನ ಹೆಂಡತಿ ಕುಳಿತಿದ್ದಳು. ಕೂದಲು ಹಿಕ್ಕಿ ಹೆರಳು ಹಾಕಿಕೊಳ್ಳುತ್ತಿದ್ದಳು. ಆಕೆಗೆ ಬಾಟ ಹೀಗೆ ಹೇಳಿದನು, ' ಅಮ್ಮಾ ಎದ್ದೇಳು, ಬಿತ್ತುವದಕ್ಕೆ ಬೀಜಗಳನ್ನು ಕೊಡು, ಅಣ್ಣ, ಕಾದಿದ್ದಾನೆ, ಬೇಗ ಏಳಮ್ಮಾ.' ಅದಕ್ಕೆ ಅಪ್ಪು ಹೆಂಡತಿ ಹೀಗೆಂದಳು, ' ಹೋಗು, ನೀನೆ ಹೋಗಿ ಕಣಜದ ಬಾಗಿಲು ತೆಗಿ, ಬೇಕಾದಷ್ಟು ತೆಗೆದುಕೊ, ನಿನ್ನಿಷ್ಟ ಬಂದಷ್ಟು ತೆಗೆದು ಕೊಳ್ಳಬಹುದಲ್ಲ. ಈಗ ನಾನು ಎದ್ದರೆ ಮನೆಯಲ್ಲೆಲ್ಲಾ ಕೂದಲುಗಳು ಬಿದ್ದಾವು.' .

ಹರೆಯನಾದ ಬಾಟ ಕೊಟ್ಟಿಗೆಗೆ ಹೋದನು.

ದೊಡ್ಡದೊಂದು ಬುಟ್ಟಿಯನ್ನು ಆರಿಸಿಕೊಂಡನು. ಏಕೆಂದರೆ ಆ ದಿನ ಬಿತ್ತುವುದಕ್ಕೆ ಬಹಳ ಧಾನ್ಯ ಬೇಕಾಗಿತ್ತು. ಆ ಬುಟ್ಟಿಯ ತುಂಬ ಗೋಧಿಯನ್ನೂ, ಜವೆಗೋಧಿಯನ್ನೂ ತುಂಬಿಕೊಂಡು ಮನೆಯೊಳಕ್ಕೆ ಬಂದನು. ಕೊಟ್ಟಿಗೆಯನ್ನು ಬಿಟ್ಟು ಒಳಕ್ಕೆ ಬಂದ ಬಾಟನನ್ನು ನೋಡಿ ಆ ಅತ್ತಿಗೆಯು ಹೀಗೆ ಹೇಳಿದಳು: 'ಎಷ್ಟು ಧಾನ್ಯ ಬೇಕೊ ಅಷ್ಟನ್ನೂ ತೆಗೆದುಕೊಂಡಿದ್ದೀಯ ಬಾಟಾ.' ಬಾಟ ಹೇಳಿದನು—'ಮೂರು ಕೊಳಗ ಜವೆಗೋಧಿ, ಎರಡು ಕೊಳಗ ಗೋಧಿ, ಒಟ್ಟು ಐದು ಕೊಳಗ ಬಿತ್ತನೆಯಾಗಬೇಕು. ಅವಿಷ್ಟೂ ನನ್ನ ಹೆಗಲ ಮೇಲಿವೆ.' ಅಣ್ಣ ಅಸ್ಸುವಿನ ಹೆಂಡತಿಯು ಮಾತನ್ನು ಮುಂದುವರಿಸಿದಳು—'ಬಾಟ ಅದೆಷ್ಟು ಗಟ್ಟಿಗನೋ ನೀನು, ದಿನೇ ದಿನೇ ಬೆಳೆಯುತ್ತ ಬರುತ್ತ ಇದೆ ನಿನ್ನ ಶಕ್ತಿ.' ಹೀಗೆಂದವಳು ಅವನ ಹೃದಯವನ್ನು ತುಳಿಯುವುದಕ್ಕೋಸ್ಕರ ಮೇಲಕ್ಕೆದ್ದು ಅವನ ಬಳಿಗೈದಿ-'ಬಾಟಾ, ಬಂದು ನನ್ನ ಸಂಗಡ ಹೊಂದಿಕೊಂಡಿರು. ನಿನಗೊಳ್ಳೆಯದಾಗುವುದು, ನಿನಗೆ ಬೇಕಾದಂತ ಬಟ್ಟೆಗಳನ್ನು ನೇಯ್ದುಕೊಡುವೆನು' ಎಂದಳು.

ಹರೆಯನಾದ ಬಾಟನು ಕಡುಕೋಪದಿಂದ ತೆಂಕಣನಾಡಿನ ಚಿರತೆಯಾದನು. ಅವಳ ಕೆಟ್ಟ ಮಾತುಗಳನ್ನು ಕೇಳಿ ಸಿಡಿಮಿಡಿಗುಟ್ಟಿದನು. ಅಸ್ಸು ಪತ್ನಿಯು ಬಹಳ

ಬೆಚ್ಚಿದಳು. ಅವಳಿಗೆ ಬಾಟನು ಹೀಗೆ ಉತ್ತರ ಕೊಟ್ಟನು:
‘ ಎಲೆ ಹೆಂಗಸೆ ಇಲ್ಲಿ ನೋಡು, ನೀನು ನನ್ನ ತಾಯಿಯ
ಸಮಾನ, ನಿನ್ನ ಯಜಮಾನ ನನ್ನ ತಂದೆಯ ಸಮಾನ;
ಆತನು ಹಿರಿಯನಾಗಿ ನನ್ನನ್ನು ಬೆಳೆಯಿಸಿಕೊಂಡು
ಬಂದನು. ಇದೇನು ದುಷ್ಟಪದ್ಧತಿಯನ್ನು ಪ್ರಾರಂಭಿಸಿ
ರುವೆ. ಮತ್ತೆ ಹೀಗೆ ಎಂದಾದರೂ ಅಂದೀಯೆ. ನಾನಾ
ದರೋ ಇನ್ನಾರೆದುರಿಗೂ ಈ ಮಾತನ್ನೆತ್ತುವುದಿಲ್ಲ ಮತ್ತು
ಮನುಷ್ಯ ಮಾತ್ರನಾದವನು ಈ ರೀತಿ ಹೇಳಿದರೆ ನಾನು
ಸಹಿಸಲಾರೆ.’ ಈ ರೀತಿಯಾಗಿ ತನ್ನ ಮನಸ್ಸನ್ನು ಬಿಚ್ಚಿ
ಹೇಳಿ ಮೂಟೆಯನ್ನೆತ್ತಿ ಹೆಗಲಮೇಲಿಟ್ಟು ಹೊಲದ
ಕಡೆಗೆ ಹೊರಟುಹೋದನು. ಹಿರಿಯವನ ಎಡೆಗೆ
ಬಿತ್ತುವ ಬೀಜಗಳನ್ನು ತೆಗೆದುಕೊಂಡು ಹೋದನು.
ಅವರಿಬ್ಬರೂ ಕೂಡಿ ತಮ್ಮ ಕೆಲಸವನ್ನು ಮುತುವರ್ಜಿ
ಯಿಂದ ಮಾಡತೊಡಗಿದರು.

೨

ಅದೇ ದಿವಸ ಸಂಜೆಯ ಸಮಯದಲ್ಲಿ ಅಣ್ಣ ಅನ್ಪು
ಮನೆಗೆ ಹಿಂತಿರುಗಿದನು. ತಮ್ಮನಾದ ಬಾಟ ಸೊಪ್ಪು
ಸದೆ, ಕುಂಟೆ ಕೂರಿಗೆಗಳನ್ನು ಹೊತ್ತುಕೊಂಡು ಎತ್ತು
ಗಳ ಹಿಂದೆ ನಿಧಾನವಾಗಿ ಬರುತ್ತಿದ್ದನು. ಅವನು
ಯಾವಾಗಲೂ ಹಾಗೆಯೇ. ಎತ್ತುಗಳು ಬರಬೇಕು.
ಬಂದ ಎತ್ತುಗಳು ಕೊಟ್ಟಿಗೆಯಲ್ಲಿ ಹಾಯಾಗಿ ಮಲಗ

ಬೇಕು. ಅವು ಮಲಗಿ ಮೆಲುಕು ಹಾಕುವಾಗ್ಗೆ ಬಾಟನು ಮನೆಗೆ ಬರಬೇಕು.

ಇತ್ತ ಅತ್ತಿಗೆಯು ಬಾಟನಿಗೆ ತಾನಾಡಿದ ಮಾತುಗಳನ್ನು ನೆನೆದು ಬೆದರಿ ಬೇರೊಂದು ಉಪಾಯವನ್ನು ಹೂಡಿದಳು. ಕೊಬ್ಬಿನ ಮುದ್ದೆಯೊಂದನ್ನು ನುಂಗಿದಳು. ಚೆನ್ನಾಗಿ ಏಟು ತಿಂದವಳಂತೆ ಅವಳ ಮೈ ವಿಕಾರವಾಯಿತು. 'ಇಲ್ಲಿ ನೋಡು, ನಿನ್ನ ಕಿರಿಯ ತಮ್ಮ ಹೀಗೆ ಮಾಡಿದ್ದಾನೆ, ಎಂದು ಗಂಡನ ಸಂಗಡ ಹೇಳುವುದಕ್ಕೆ ಸಿದ್ಧಮಾಡಿಕೊಂಡಳು.

ಗಂಡ ಅಪ್ಪು ಸಂಜೆಯಲ್ಲಿ ಹೊಸಿಲೊಳಗೆ ಕಾಲಿಟ್ಟನು. ಎಂದಿನಂತೆಯೇ ಮನೆಯೊಳಗೆ ಬಂದನು. ಪ್ರೀತಿಯ ಪತ್ನಿಯನ್ನು ಕೇಡಿಗರಾರೋ ಬಹಳವಾಗಿ ದಂಡಿಸಿದಂತಿತ್ತು. ಆಕೆಯಾದರೋ ಎಂದಿನಂತೆ ಎದ್ದು ಬರಲಿಲ್ಲ, ಕೈಕಾಲಿಗೆ ನೀರು ಕೊಡಲಿಲ್ಲ. ಅವನ ಮುಂದೆ ದೀಪವನ್ನು ಹಚ್ಚಿಡಲಿಲ್ಲ. ಮನೆಯೆಲ್ಲಾ ಕತ್ತಲು ಕೂಡಿತ್ತು. ಬಹುವಾಗಿ ಬೇನೆ ತಿನ್ನುತ್ತಾ ಅವಳು ಮಲಗಿದ್ದಳು. 'ನಾನಿಲ್ಲದಾಗ ನಿನ್ನನ್ನು ಕೆಣಕಿದವರಾರು? ಎಂದು ಅಪ್ಪು ಕೇಳಿದ, ಅದಕ್ಕವಳು " ನನ್ನನ್ನು ಕೆಣಕುವುದಕ್ಕೆ ಬರುವವರಿನ್ನಾರು?– ನಿನ್ನ ಚಿಕ್ಕ ತಮ್ಮನೇ– ಆ ಬಾಟ. ಧಾನ್ಯ ತೆಗೆದುಕೊಂಡು ಬರುವುದಕ್ಕೆ ನೀನು ಕಳುಹಿಸಿದ್ದೆ ನಿನ್ನ ತಮ್ಮನನ್ನು. ಅವನೋ ಬಂದವನು

ನಾನೊಬ್ಬಳೇ ಕುಳಿತಿರುವುದನ್ನು ಕಂಡನು. ಆ ತುಂಟನು ಹೇಳಿದುದನ್ನಾದರೂ ಕೇಳು: 'ಬಾ ಇಬ್ಬರೂ ಒಂದಾಗಿ ಹೊಂದಿಕೊಂಡಿರೋಣ, ಬೇಗ ಹೆರಳು ಹಾಕಿಕೊ.'– ಅವನಂದ ಮಾತು ನಾನು ಕಿವಿಯಾರ ಸಹ ಕೇಳಲಿಲ್ಲ. ನಾನೆಂದೆ: 'ಕಣ್ಣಿಟ್ಟು ನೋಡು, ನಾನು ನಿನ್ನ ತಾಯಿಯಲ್ಲವೆ· ನಿನ್ನ ಅಣ್ಣನು ನಿನಗೆ ತಂದೆಯ ಸಮಾನನಲ್ಲವೇ! ಇದೇನು ಹೀಗೆ ವೈಮರತೆಯಲ್ಲ!' ನನ್ನ ಮಾತನ್ನು ಕೇಳಿದ ಬಾಟನು ಬೆದರಿ, ಬೆಚ್ಚಿ, ಭಯಪಡಿಸಿ ದಂಡಿಸಿದನು. ನಿನ್ನಲ್ಲಿ ನಾನೇನಾದರೂ ದೂರು ಹೇಳಿಯೇನೆಂದು ಅವನಿಗಷ್ಟು ಭಯ ಅನ್ನು! ಅವನೇನಾದರೂ ಬದುಕಿದರೆ ನಾನು ಸತ್ತೆನೆಂದು ತಿಳಿದುಕೋ! ಅದೋ ಬಾಟಾ ಬರುತ್ತಿರುವನು· ನಾನು ನಿನಗೆ ದೂರು ಹೇಳಿದೆನೆಂದು ತಿಳಿದು ಬಂದರೆ ಹಗಲೇ ನನ್ನನ್ನು ಕೊಲ್ಲಬೇಕೆಂದಿದ್ದವನು ಈ ರಾತ್ರಿ ಕೊಲ್ಲದೆ ಬಿಟ್ಟಾನೆ."

ಹಿರಿಯಣ್ಣನು ಸಿಟ್ಟಿನಿಂದ ಗುಡುಗುಡಿಸಿದನು. ತೆಂಕಣ ನಾಡಿನ ಚಿರತೆಯಂತಾದನು. ತನ್ನ ಕತ್ತಿಯನ್ನು ಮಸೆದುಕೊಂಡನು· ಹರಿತವಾದ ಆ ಕತ್ತಿಯನ್ನು ತನ್ನ ಕೈಯಲ್ಲಿ ಬಿಗಿಯಾಗಿ ಹಿಡಿದುಕೊಂಡನು. ಕೊಟ್ಟಿಗೆಯೊಳಕ್ಕೆ ಹೋದನು· ಬಾಗಿಲ ಹಿಂದೆ ನಿಂತುಕೊಂಡನು. ಅಣ್ಣನು ತಮ್ಮನನ್ನು ಕೊಲ್ಲಲು ಸಿದ್ಧವಾಗಿದ್ದನು.

ಇದೇ ಸಮಯದಲ್ಲಿ ಬಾಟನು ದನಗಳ ಹಿಂದೆ

ಕೊಟ್ಟಿಗೆಯ ಸಮೀಪಕ್ಕೆ ಬಂದನು. ಎಂದಿನಂತೆ ಅವನ ಬೆನ್ನಿನ ಮೇಲೆ ಭಾರವಾದ ಮೂಟೆಯಿತ್ತು. ಆ ಮೂಟೆಯಲ್ಲಿ ಕಾಳು ಕಡಿ, ಹಣ್ಣುಹಂಪಲುಗಳಿದ್ದುವು. ಸಂಜೆ ಬೆಳಕು ಮುಸಕು ಮುಸಕಾಗಿತ್ತು. ಮುಂದುಗಡೆ ಇದ್ದ ದನವು ಕೊಟ್ಟಿಗೆಯೊಳಕ್ಕೆ ಕಾಲಿಟ್ಟಿತು. ಹಿಂತಿರುಗಿ ಬಾಟನಿಗೆ ಹೇಳಿತು: 'ಕಂಡೆಯಾ ನಿನ್ನ ಅಣ್ಣನನ್ನ. ಅದೋ ಅಲ್ಲಿ ನಿಂತಿದ್ದಾನೆ, ಕತ್ತಿ ಹಿಡಿದುಕೊಂಡು. ನಿನ್ನ ಕೊಲ್ಲಲು ಕಾದಿದ್ದಾನೆ. ಓಡು, ಅವನೆದುರು ಹೋಗಬೇಡ.' ಇನ್ನೊಂದು ಹಸುವೂ ಹಾಗೆಯೇ ಅಂದಿತು. ಮುಂದಿನ ಹಸುವು ಹೇಳಿದುದನ್ನು ಬಾಟ ಕೇಳಿದನು. ಹಿಂದಿನ ಹಸುವು ಕೊಟ್ಟ ಎಚ್ಚರಿಕೆಯನ್ನೂ ತಿಳಿದುಕೊಂಡನು.

ಕೊಟ್ಟಿಗೆಯ ಬಾಗಿಲ ಸಂದಿಯಲ್ಲಿ ಎರಡು ಹೆಜ್ಜೆಗಳು ನಿಂತಿದ್ದುವು. ಅವೆರಡೂ ಅನ್ಪು ಕಾಲುಗಳು. ಅನ್ಪು ಕೈಯಿನ ಕತ್ತಿಯ ತುದಿಯು ಸಹ ಕಾಣುತ್ತಿತ್ತು.

ಬಾಟನು ಮೂಟೆಯನ್ನು ಕೆಳಗೆ ಹಾಕಿ ಕೊಟ್ಟಿಗೆಯಿಂದ ಆಚೆಗೆ ಪರಾರಿಯಾದನು. ಕತ್ತಿಯನ್ನು ಹಿಡಿದುಕೊಂಡು ಅನ್ಪು ಹಿಂಬಾಲಿಸಿದನು. ಬಾಟ ಮುಂದೆ ಅನ್ಪು ಹಿಂದೆ, ಹೀಗೆ ಓಡಿಯೇ ಓಡಿದರು. ಅನ್ಪು ಕೆದರಿದ್ದ, ಕಿಚ್ಚಾಗಿದ್ದ; ಬಾಟ ಬೆದರಿದ್ದ, ಬೆಂಡಾಗಿದ್ದ.

ಬಾಟನು ಮನೆದೇವರಾದ ರಾಹರಾಖತಿಗೆ ಪ್ರಾರ್ಥಿಸಿಕೊಂಡನು. 'ಎಲೈ ನನ್ನ ಶುಭವಿಭುವೆ! ನೀನೇ

ಅಲ್ಲವೇ 'ಕೆಟ್ಟದನ್ನು ಒಳ್ಳೆಯದರಿಂದ ದೂರವಾಗಿಟ್ಟಿರುವವನು. ನನ್ನಲ್ಲಿ ದಯಮಾಡು.' ರಾಹರಾಖತಿ ದೇವನು ಈ ಬೇಡಿಕೆಯನ್ನು ಕೇಳಿದನು ರಾದೇವನು ಅಣ್ಣನಿಗೂ ತಮ್ಮನಿಗೂ ನಡುವೆ ಆಳವಾದ ನೀರನ್ನು ನಿಲ್ಲಿಸಿದನು. ಆ ಮಡುವಿನಲ್ಲಿ ಮೊಸಳೆಗಳನ್ನು ಬಿಟ್ಟನು. ಈ ದಡದಲ್ಲಿ ಅಣ್ಣ ಅನ್ಪು, ಆ ದಡವಲ್ಲಿ ತಮ್ಮ ಬಾಟ.

ಅನ್ಪು ತನ್ನ ಸಿಟ್ಟನ್ನು ತಾನೇ ನುಂಗಿಕೊಳ್ಳಲಾರದೆ ಎರಡೆರಡು ಬಾರಿ ತನ್ನ ಕೈಗಳಿಗೆ ತಾನೆ ಹೊಡೆದು ಕೊಂಡನು. ತಮ್ಮ ಬಾಟನನ್ನು ಕೊಲ್ಲಲಿಲ್ಲವೆಂದು ತನ್ನನ್ನು ತಾನೇ ಶಪಿಸಿಕೊಂಡನು.

ಆಚೆ ದಡದಿಂದ ಬಾಟ ಕೂಗಿ ಹೇಳಿದನು. 'ಅಣ್ಣ, ನೀನು ಮಾಡಿದ್ದೆಲ್ಲಾ ನಾನು ನೋಡಿದ್ದೇನೆ. ಬೆಳಗಿನ ವರೆಗೆ ಹಾಗೆಯೇ ನಿಂತಿರು. ಬೆಳಗಾಗಲಿ, ರಾದೇವನು ಎದ್ದೇಳಲಿ. ಅವನೆದುರಲ್ಲಿ ನಾನು ದರಿಯಾಪ್ತಿ ಮಾಡುವೆನು. ಶಿಷ್ಟ ಮತ್ತು ದುಷ್ಟ ಶಕ್ತಿಗಳನ್ನು ಬಲ್ಲವನವನು. ಇನ್ನು ಮುಂದೆ ನಿನ್ನೊಂದಿಗೆ ನಾಸಿರಲಾರೆ. ನೀನು ಕಾಲಿಟ್ಟಲ್ಲಿ ನಾನು ಕಾಲಿಡುವುದಿಲ್ಲ. ನಾನು ಅಕೇಷಿಯ ಕಣಿವೆಗೆ ಹೋಗಿಬಿಡುತ್ತೇನೆ.'

೨

ಬೆಳಗಾಯಿತು. ನೆಲವೆಲ್ಲಾ ಕಾಣುವಂತಾಯಿತು. ದೇವ ರಾಹರಾಖತಿ ಉದಯಿಸಿದನು. ಆಗ ಒಬ್ಬನು

ಇನ್ನೊಬ್ಬನ ಮುಖವನ್ನು ನೋಡಿದನು. ಬಾಟನು ಅಣ್ಣ ಅನ್ಪುವಿಗೆ ಹೀಗೆಂದನು, "ಏಕ್ಕಾಗಿ ನೀನು ಈ ರೀತಿ ಯಾಗಿ ಉಪಾಯದಿಂದ ನನ್ನ ಕೊಲ್ಲಲು ಬಂದೆ? ನನ್ನ ಬಾಯಿಂದ ನನ್ನ ಮಾತುಗಳನ್ನು ನೀನು ಕೇಳಬಯಸು ವುದಿಲ್ಲವೆ? ನಿಜವಾಗಿಯೂ ನಾನು ನಿನ್ನ ತಮ್ಮನಲ್ಲವೆ? ನೀನು ನನ್ನ ತಂದೆಯ ಸಮಾನನಲ್ಲವೆ! ನಿನ್ನ ಹೆಂಡ ತಿಯು ನನಗೆ ತಾಯಿಯಲ್ಲವೆ! ಯೋಚಿಸಿ ನೋಡು, ನಿಶ್ಚಯವನ್ನು ಕೇಳಬಯಸುವೆಯಾದರೆ ನಾನು ಹೇಳು ವುದನ್ನು ಕೇಳು. ಬಿತ್ತುವ ಬೀಜವನ್ನು ತರುವುದಕ್ಕಾಗಿ ನನ್ನನ್ನು ಮನೆಗೆ ಹೋಗೆಂದವರಾರು? ನೀನೆ! ನಾನು ಮನೆಗೆ ಹೋದಾಗ 'ಬಾರೋ- ಬಾಟಾ, ನನ್ನ ಸಂಗಡ ಕೂಡೊ, ಇರೋ ಬಾಟಾ' ಎಂದು ಹೇಳಿದವರಾರು? ನಿನ್ನ ಹೆಂಡತಿಯೆ. ನೋಡು! ಇವೇ ಯಥಾರ್ಥವಾದ ಮಾತುಗಳನ್ನು ನಿನ್ನ ಹೆಂಡತಿಯು ಅನರ್ಥವಾಗಿ ತಿರುಗಿಸಿ ನಿನಗೆ ಹೇಳಿದ್ದಾಳೆ" ಹೀಗೆಯೇ ಅನೇಕ ಸಂಗತಿಗಳನ್ನು ತಿಳಿಯಹೇಳಿ ಅತ್ತಿಗೆಯ ವಿಚಾರವೆಲ್ಲ ಅನ್ಪುವಿಗೆ ಗೊತ್ತಾ ಗುವಂತೆ ಒತ್ತಿ ಒತ್ತಿ ಹೇಳಿದನು. ರಾಹರಾಖತಿದೇವನ ಮೇಲೆ ಆಣೆ ಇಟ್ಟುಕೊಂಡನು. ಮತ್ತೆ ಹೇಳಿದನು, "ನೀನು ಮೋಸಕ್ಕೆ ಸಿಕ್ಕಿ ನನ್ನನ್ನು ಕೊಲ್ಲುವುದಕ್ಕೆ ಬಂದಿ ದ್ದೀಯಲ್ಲವೆ, ಅದಕ್ಕಿಂತ ಕೆಟ್ಟತನವಿನ್ನಾವುದು!" ಹೀಗೆಂದ ವನು ತನ್ನ ಚೂರಿಯನ್ನು ತೆಗೆದು ತನ್ನ ಮೈಯಿಂದ

ಮಾಂಸವನ್ನು ಕತ್ತರಿಸಿ ನೀರಿನಲ್ಲಿ ಎಸೆದನು. ಮೀನು
ಗಳು ಆ ಮಾಂಸವನ್ನು ನುಂಗಿದವು.

ಈ ಬಳಿಗೆ ಬಾಟನಿಗೆ ಶಕ್ತಿಗುಂದಿತು. ಎಚ್ಚರ
ತಪ್ಪಿ ನೆಲದ ಮೇಲೆ ಬಿದ್ದನು. ಅನ್ಪು ತನ್ನನ್ನು ತಾನೇ
ಶಪಿಸಿಕೊಂಡನು. ಆ ದೂರದ ದಡದಲ್ಲಿ ನಿಂತುಕೊಂಡು
ಬಹಳವಾಗಿ ಅತ್ತುಬಿಟ್ಟನು. ತನ್ನ ತಮ್ಮನ ಬಳಿಗೆ
ಹೋಗುವುದಕ್ಕಾಗದು. ಮಡುವಿನ ತುಂಬ ಮೊಸಳೆಗಳು.
ಹೀಗೆ ಪರಿತಾಪ ಪಡುತ್ತಿರುವಾಗ ತಮ್ಮನು ಅಣ್ಣನನ್ನು
ಕುರಿತು ಹೀಗೆಂದನು, " ಅಣ್ಣ, ಕೆಟ್ಟದ್ದನ್ನು ಬಗೆದಿದ್ದಿ.
ಹಾಗೆ ಒಳ್ಳೆಯದನ್ನೂ ಬಗೆಯುವೆಯ! ನಾನಾದರೊ
ನಿನಗೆ ಒಳ್ಳೆಯದನ್ನೇ ಸದಾ ಸರ್ವದಾ ಕೋರಿದ್ದೇನೆ.

" ಮನೆಗೆ ಹೋಗು. ದನಕರುಗಳನ್ನು ನೋಯಿ
ಸಬೇಡ. ನೀನು ಇದ್ದಲ್ಲಿ ನಾನು ಖಂಡಿತ ನಿಲ್ಲುವುದಿಲ್ಲ.
ಅಕೇಷಿಯಾ ಕಣಿವೆಗೆ ನಾನು ಹೋಗುವವನಿದ್ದೇನೆ.
ನೀನು ನನಗೆ ಮಾಡಬೇಕಾದ ಸತ್ಕಾರ್ಯವನ್ನು ವಿವರಿಸು
ತ್ತೇನೆ ಕೇಳು. ಕೆಲವು ವಿಷಯಗಳನ್ನು ನೆನಪಿನಲ್ಲಿಟ್ಟುಕೊ.
ಅವುಗಳನ್ನು ನೀನು ಮನಗಂಡ ಕೂಡಲೇ ನನಗೋಸ್ಕರ
ವಾಗಿ ನೀನು ಹುಡುಕಿಕೊಂಡು ಬರಬೇಕು.

" ನಾನಾದರೊ ನನ್ನಾತ್ಮವನ್ನು ಸೆಳೆದು ಹೊರಕ್ಕೆ
ತೆಗೆದು ಅಕೇಷಿಯಾ ಹೂವಿನಲ್ಲಿಡುತ್ತೇನೆ. ಆ ಹೂವು
ಒಂದು ಅಕೇಷಿಯಾ ಮರದ ತುದಿಯಲ್ಲಿರುತ್ತದೆ. ಅಕೇ

ಷಿಯಾ ಮರವನ್ನು ಯಾರಾದರೂ ಕಡಿದು ಅಧು ಕೆಳಕ್ಕೆ ಬಿದ್ದರೆ ನೀನು ನನ್ನಾತ್ಮಕ್ಕಾಗಿ ಹುಡುಕಿಕೊಂಡು ಬರ ಬೇಕು. ನನ್ನಾತ್ಮವು ನಿನಗೆ ಬೇಗ ಸಿಕ್ಕುವುದಿಲ್ಲ. ಎಷ್ಟು ದಿನಗಳಾದರೂ ನೀನು ಹುಡುಕಲೇ ಬೇಕು. ಏಳು ವರ್ಷ ಗಳು ಯಾಕಾಗವಲ್ಲವು! ನೀನು ಬೇಸರ ಪಡಬಾರದು! ನಿನ್ನ ಹೃದಯ ಕದಲಬಾರದು. ನನ್ನಾತ್ಮ ನಿನ್ನ ಕೈಗೆ ಸಿಕ್ಕೇ ಸಿಕ್ಕುವುದು. ಅದನ್ನು ತೆಗೆದುಕೊಂಡು ಒಂದು ಬಟ್ಟಲು ತಣ್ಣೀರಿನಲ್ಲಿಡು. ಆಗ ನಾನು ಪುನಃ ಜೀವಂತ ನಾಗಿ, ನಡೆದ ಅಪರಾಧವನ್ನೆಲ್ಲಾ ನಿನಗೆ ಹೇಳಬಲ್ಲವ ನಾಗುತ್ತೇನೆ. ನನಗೆ ಹೀಗೆ ಹೀಗೆಲ್ಲಾ, ಏನೇನೆಲ್ಲಾ ನಡೆಯುತ್ತಿದೆ ಎಂಬುದು ನಿನಗೆ ಗೊತ್ತಾಗುವ ಬಗ್ಗೆ ಹೇಗೆಂದು ವಿವರಿಸುತ್ತೇನೆ ಕೇಳು. ನಾನು ಕಷ್ಟದಲ್ಲಿರು ವಾಗ, ಊರಿನಲ್ಲಿ ನಿನ್ನ ಕೈಗೆ ಯಾರಾದರೂ ಸಾರಾಯ ವನ್ನು ಕೊಟ್ಟರೆ ಆ ಸಾರಾಯಿ ಬಹುವಾಗಿ ಕದಲಾ ಡುವುದು. ಆ ಕ್ಷಣವೇ ನೀನು ಆ ಸ್ಥಳವನ್ನು ಬಿಟ್ಟು ನನ್ನನ್ನು ಹುಡುಕಿಕೊಂಡು ಬರಬೇಕು."

ಹೀಗೆ ಹೇಳಿ ಬಾಟನು ಅಕೇಷಿಯಾ ಕಣಿವೆಗೆ ಹೊರಟುಹೋದನು. ಅಣ್ಣ ಅನ್ಪುವು ಮನೆಗೆ ಬಂದನು. ತಲೆಯ ಮೇಲೆ ಕೈಯಿಟ್ಟು ಕುಳಿತುಕೊಂಡನು. ಹೊರ ಗೆದ್ದು ಹೋಗಿ ತಲೆಯ ಮೇಲೆ ಮಣ್ಣು ಎರಚಿಕೊಂಡನು. ರೇಗಿ ರೇಗಿ ಮನೆಯೊಳಕ್ಕೆ ಬಂದನು. ತನ್ನ ಹೆಂಡತಿ

ಯನ್ನು ಕತ್ತರಿಸಿಹಾಕಿದನು. ಅವಳ ಮಾಂಸವನ್ನು ನಾಯಿಗಳಿಗೆ ಹಾಕಿದನು. ತನ್ನ ತಮ್ಮನಿಗಾಗಿ ಶೋಕಿಸುತ್ತಾ ಕುಳಿತುಕೊಂಡನು.

೪

ಹೀಗೆಯೇ ಬಹಳ ದಿನಗಳು ಕಳೆದುಹೋದವು. ಬಾಟನು ಅಕೇಷಿಯಾ ಕಣಿವೆಯಲ್ಲಿ ವಾಸವಾಗಿದ್ದನು. ಅವನು ಏಕಾಕಿ. ಮರುಭೂಮಿಯಲ್ಲಿದ್ದ ಮೃಗಗಳನ್ನು ಬೇಟೆಯಾಡುತ್ತಾ ದಿನ ಕಳೆಯುತ್ತಿದ್ದನು. ಸಂಜೆಗೆ ಹಿಂತಿರುಗಿ ಬಂದು ಅಕೇಷಿಯಾ ಮರದ ಬುಡದಲ್ಲಿ ಒರಗಿ ನಿದ್ರಿಸುತ್ತಿದ್ದನು. ಅದೇ ಅಕೇಷಿಯಾ ಮರದ ಮೇಲೆಯೇ ಎತ್ತರವಾದ ಒಂದು ಹೂವಿನಲ್ಲಿ ಅವನ ಆತ್ಮವು ಮಂಡಿಸಿತ್ತು. ಕೆಲವು ದಿನಗಳ ನಂತರ ತನ್ನ ಬಾಹುಬಲದಿಂದ ಸಾಮಾನುಗಳನ್ನು ಸಂಗ್ರಹಿಸಿ ಅದೇ ಅಕೇಷಿಯಾ ಕಣಿವೆಯಲ್ಲಿಯೇ ಒಂದು ಗೋಪುರವನ್ನು ಕಟ್ಟಿದನು. ಆ ಗೋಪುರದ ತುಂಬಾ ಸುಖಪ್ರದವಾದ ಸಾಮಗ್ರಿಗಳಿದ್ದುವು. ತನಗೋಸ್ಕರವಾಗಿ ಮನೆಯೊಂದನ್ನು ಕಟ್ಟಿಕೊಳ್ಳಬೇಕೆಂಬ ಆಸೆಯು ಬಾಟನಿಗೆ ಬಹಳವಾಗಿತ್ತು.

ಒಂದಾನೊಂದು ದಿವಸ ಬಾಟನು ತನ್ನ ಗೋಪುರ ಗೃಹವನ್ನು ಬಿಟ್ಟು ಹೊರಕ್ಕೆ ಬಂದಿದ್ದನು. ಅದೇ ಸಮಯದಲ್ಲಿ ಒಂಬತ್ತು ದೇವತೆಗಳೂ ಸಹ ಬಾಟನ

ದೇಶವನ್ನು ನೋಡಲು ತಿರುಗಾಡುತ್ತಿದ್ದರು. ಬ್ಾಟನನ್ನು ಕಂಡು ಅವರವರೊಳಗೆ ಮಾತಾಡಿಕೊಂಡು ಬಾಟನಿಗೆಂದರು. " ಓ ಬಾಟಾ, ನೀನು ನವದೇವತೆಗಳ ಮಹಾ ವೃಷಭನಾಗಿದ್ದಿ. ಅದೇನು ಒಂಟಿಗನಾಗಿದ್ದೀಯಲ್ಲಾ. ಅಣ್ಣ ಅನ್ಪುವಿನ ಪತ್ನಿಗೆ ಹೆದರಿ ಹಳ್ಳಿಯನ್ನೇ ಬಿಟ್ಟು ಬಂದೆ. ಕೇಳಿದೆಯಾ, ಅವನ ಹೆಂಡತಿ ತೀರಿಹೋದಳು. ನಿನಗೆ ವಿರೋಧವಾಗಿ ನಡೆದಂಥ ಎಲ್ಲಾ ವಿಚಾರಕ್ಕೂ ನೀನು ಉತ್ತರವನ್ನಿತ್ತ ಹಾಗಾಯಿತು." ಹೀಗೆಂದು ದೇವತೆಗಳೆಲ್ಲರೂ ಆತನಿಗಾಗಿ ಬಹಳ ಮರುಗಿದರು. ಕುನುಮು ದೇವನಿಗೆ ರಾಹರಾಖತಿಯು ಹೀಗೆಂದನು– " ಇಲ್ಲಿ ನೋಡು, ಬಾಟನಿಗೆ ತಕ್ಕಂತಹ ಒಬ್ಬಳು ಹೆಂಗಸನ್ನು ಮಾಡಿಕೊಡು, ಆತನು ಒಬ್ಬನೇ ಇರುವುದು ಚೆನ್ನಾಗಿರುವುದಿಲ್ಲ." ಕುನುಮು ಬಾಟನಿಗೆ ತಕ್ಕಂತಹ ಒಂದು ಹೆಣ್ಣನ್ನು ನಿರ್ಮಿಸಿದನು. ಅವಳಾದರೋ ಆ ನಾಡಿನಲ್ಲಿ ಯಾರೂ ಕಾಣದಷ್ಟು ಸೌಂದರ್ಯದಿಂದ ಕೂಡಿದ್ದಳು. ಒಂಬತ್ತು ದೇವತೆಗಳ ಶಕ್ತಿಯೂ ಅವಳಲ್ಲಿತ್ತು. ಏಳು ಜನ ಹಾಥರ್ ದೇವತೆಗಳು ಬಂದು ಅವಳನ್ನು ನೋಡಿದರು. ನೋಡಿ ಒಂದೇ ಮಾತಿನಲ್ಲೆಂದರು—ಇವಳಾದರೋ ಬಹು.ತೀಕ್ಷ್ಣವಾದ ನೋವಿನಿಂದ ಸಾಯುವಳು.

ಬಾಟನು ತನ್ನ ಹೆಂಡತಿಯನ್ನು ಇನ್ನಿಲ್ಲದ ಹಾಗೆ ಪ್ರೀತಿಸುತ್ತಿದ್ದನು. ಅವಳು ಅವನ ಜೊತೆಯಲ್ಲಿಯೇ

ವಾಸವಾಗಿದ್ದಳು. ಬಾಟನು ಮರುಭೂಮಿಯ ಮೃಗ ಗಳನ್ನೆಲ್ಲಾ ಬೇಟೆಯಾಡಿ ತನ್ನ ಹೆಂಡತಿಯ ಮುಂದೆ ತಂದು ರಾಸಿಹಾಕುತ್ತಿದ್ದನು. ಅವಳಿಗೆ ಅವನು ಎಚ್ಚರಿಕೆ ಯನ್ನು ಸಹ ಕೊಟ್ಟಿದ್ದನು. “ಎಲೈ ರೂಪಿಣಿ, ಈ ಅಕೇಷಿಯಾ ವನವನ್ನು ಬಿಟ್ಟು ಹೊರಗೆ ಕಾಲಿಡಬೇಡ. ಸಮುದ್ರವಾದರೋ ನಿನಗಾಗಿ ಕಾದಿದೆ. ಸಮುದ್ರದಿಂದ ಮಾತ್ರ ನಾನು ನಿನ್ನನ್ನು ಉಳಿಸಿಕೊಳ್ಳಲಾರೆ. ನಾನೂ ಸಹ ನಿನ್ನ ಹಾಗೆಯೇ ಅಬಲನಾಗಿದ್ದೇನೆ. ನನ್ನ ಆತ್ಮವು ಅಕೇಷಿಯಾ ಮರದ ತಲೆಹೂವಿನಲ್ಲಿ ನಿಂತಿದೆ. ಇನ್ನಾ ರಾದರೂ ಈ ಗುಟ್ಟನ್ನು ಕಂಡುಕೊಂಡರೆ ಅವರ ಸಂಗಡ ನಾನು ಕಾದಾಡುವುದೇ ಕಡು ಕಷ್ಟ.” ಈ ರೀತಿಯಾಗಿ ತನ್ನ ಹೃದಯವನ್ನೆಲ್ಲಾ ಆಕೆಗೆ ಬಿಚ್ಚಿ ಹೇಳಿದ್ದನು. ಆಕೆಗೆ ಬಾಟನ ಬಲಾಬಲವೆಲ್ಲಾ, ನುಡಿನಡೆಯೆಲ್ಲಾ ಮತ್ತು ರೀತಿನೀತಿಯೆಲ್ಲಾ ಗೊತ್ತಾಗಿತ್ತು.

೫

ಹೀಗೆಯೇ ಕೆಲವು ದಿವಸಗಳ ನಂತರ ಒಂದು ದಿನ ಬಾಟನು ಎಂದಿನಂತೆ ಬೇಟೆಗಾಗಿ ಹೊರಹೊರಟನು. ಅವನ ಆ ಪ್ರಾಯದ ಹೆಂಡತಿಯೂ ಸಹ ಅಕೇಷಿಯಾ ವನದೊಳಗೆ ಅಡ್ಡಾಡುತ್ತಿದ್ದಳು. ಆ ವನವಾದರೋ ಅವರ ಮನೆಗೆ ಸಮೀಪ. ವನದೊಳಗೆ ಓಡಾಡುವ ಈ ರಮಣಿಯನ್ನು ಸಮುದ್ರವು ಕಂಡುಬಿಟ್ಟಿತು. ಕಂಡ

ಕೂಡಲೇ ಇವಳ ಕಡೆಗೆ ಅಲೆಗಳನ್ನು ಅಟ್ಟಿತು. ' ಇವಳಾ ದರೋ ಅಲೆಗಳ ಹಿಡಿತಕ್ಕೆ ಸಿಕ್ಕದೆ ಓಡಿ ಓಡಿದಳು. ಮನೆ ಯೊಳಗೆ ಬಂದು ಅಡಗಿದಳು.

ಸಮುದ್ರವು ಅಕೇಷಿಯವನ್ನು ಕರೆದು ಹೀಗೆ ಹೇಳಿತು. " ಆಹಾ, ಆ ರೂಪಿಣಿಯನ್ನು ನನಗೆ ಯಾರಾ ದರೂ ಹಿಡಿದುಕೊಟ್ಟಾರೆ! " ಅಕೇಷಿಯವು ಆಕೆಯ ಕೇಶಪಾಶದ ಒಂದು ಸೀಳು ಕೂದಲನ್ನು ತಂದು ಕೊಟ್ಟಿತು. ಸಮುದ್ರವು ಅದನ್ನು ಹೊತ್ತುಕೊಂಡು ಹೋಗಿ ಈಜಿಪ್ಟಿನ ಚೌಳಿಗರ ಊರಿನಲ್ಲಿ ಹಾಕಿತು. ಚೌಳಿಗರು ಫೇರೋ ಚಕ್ರವರ್ತಿಗಳ ನಾರುಮಡಿಗಳನ್ನು ಒಗೆಯುತ್ತಿದ್ದರು. ಸೀಳು ಕೂದಲಿನ ಸುವಾಸನೆಯು ಫೇರೋ ನಾರುಮಡಿಗಳಲ್ಲಿ ವ್ಯಾಪಿಸಿತು. ಫೇರೋ ಪರಿ ವಾರದವರು ಆ ಚೌಳಿಗರಾದ ಅಗಸರನ್ನು ಬಹಳವಾಗಿ ಬೈದರು : " ಇದೇನು ಶಿಕ್ಷೆಯ ಭಯವಿಲ್ಲದೆ ಹೀಗೆ ಮಾಡಿ ದ್ದೀರ? ಅರಮನೆಯ ಬಟ್ಟೆಗಳಲ್ಲಿ ಎಣ್ಣೆಯ ವಾಸನೆಯು ಹೇಗೆ ಬರಬೇಕು. ನಿಮಗೆ ಎಚ್ಚರಿಕೆಯಿಲ್ಲ."

ನಿತ್ಯನಿತ್ಯವೂ ಚೌಳಿಗರು ಬೈಸಿಕೊಂಡರು. ಕಡೆಗೆ ಏನು ಮಾಡಬೇಕೆಂದು ಅವರಿಗೆಲ್ಲಾ ಅರಿವಾಯಿತು. ಮುಖ್ಯ ಚೌಳಿಗನು ಸಮುದ್ರ ದಡದಲ್ಲಿ ಮನತಪ್ಪಿ ತಿರು ಗುತ್ತಿದ್ದನು. ಆತನ ಹೃದಯವು ಅವನೊಡನೆ ನಿತ್ಯ ಹೋರಾಡಿ, ಹೋರಾಡಿ ಆತನಿಗೇ ವಿರೋಧಿಯಾಗಿತ್ತು.

ಈ ದಿವಸ ಆತನು ಸುಮ್ಮನೆ ಸಮುದ್ರ ದಡದಲ್ಲಿ ನಿಂತಿದ್ದನು. ಆಗ ಅಕಸ್ಮಾತ್ ಆಗಿ ಒಂದು ಸೀಳು ಕೂದಲು ಅವನೆದುರಲ್ಲಿ, ಅಲೆಗಳಮೇಲೆ ಕುಣಿದಾಡುತ್ತಾ ಕಾಣಿಸಿಕೊಂಡಿತು. ಒಡನೆಯೇ ಚೌಳಿಗನ ಕಡೆಯವರು ಅಲೆಗಳ ನಡುವೆ ನುಗ್ಗಿ ಹೋಗಿ ಆ ಕೇಶವನ್ನು ಹಿಡಿದು ತಂದರು. ಅದರ ಪರಿಮಳವು ಬಹು ಮಧುರವಾಗಿತ್ತು.

ಬಾಟನ ಸತಿಯ ಕೇಶವು ಕರದಿಂದ ಕರಕ್ಕೆ ದಾಟಿ ಕಡೆಗೆ ಫೇರೋ ಚಕ್ರವರ್ತಿಯ ಕೈಗೆ ತಲಪಿತು. ಕಾವಲಿನವರು ಬರಹಗಾರರನ್ನೂ, ಪಂಡಿತರನ್ನೂ ಕರೆತಂದರು. ಅವರೆಲ್ಲಾ ಒಂದೇ ಉಸಿರಿನಿಂದ ಹೀಗೆ ಹೇಳಿದರು. "ಈ ಸೀಳುಕೂದಲು ರಾಹರಾಖತಿಯ ಅಂಶಪುತ್ರಿಯದು. ಸಕಲ ದೇವತೆಗಳ ಅಂಶಸಾರವು ಅವಳಲ್ಲಿದೆ. ಈ ಸೀಳು ಕೂದಲು ಬೇರೆ ನಾಡಿನಿಂದ ಫೇರೋ ಕಾಲೆಡೆಗೆ ಬಂದ ಕಾಣಿಕೆಯೆಂದು ಭಾವಿಸಬೇಕು. ಹೊಸ ನಾಡುಗಳಿಗೆ ಬೇಹುಗಾರರನ್ನು ಕಳುಹಿಸಿ. ಆದರೆ ಮಾತ್ರ ಅಕೇಷಿಯಾ ಕಣಿವೆಗೆ ಒಬ್ಬಿಬ್ಬರು ಹೋದರೆ ಸಾಲದು. ಒಬ್ಬ ನಾಯಕನನ್ನು ಕಳುಹಿಸು, ಆತನೊಂದಿಗೆ ಅನೇಕ ಜನ ಭಟರು ಆಯುಧಪಾಣಿಗಳಾಗಿ ಹೋಗಲಿ."

ಬಹಳ ಸಂತೋಷಪಟ್ಟ ಫೇರೋ ಚಕ್ರವರ್ತಿಯು ಅತ್ಯುತ್ತಮವಾದ ಸಲಹೆ ಅದೆಂದು, ನಾಯಕರನ್ನೂ ಸೈನಿಕರನ್ನೂ ದಿಕ್ಕು ದೇಶಾಂತರಗಳಿಗೆ ಕಳುಹಿಸಿ

ಬಹು ದಿವಸಗಳ ಮೇಲೆ ಬಹು ದಿವಸಗಳು ಕಳೆದುವು. ಕಾಣದ ಕೇಳದ ದೇಶಗಳಿಗೆಲ್ಲಾ ಹೋಗಿ ಬಂದವರು ಬರಿಗೈಲಿ ಬಂದರು. ಅಕೇಷಿಯಾ ಕಣಿವೆಗೆ ಹೋದ ಸೈನಿಕರು ಮಾತ್ರ ಹಿಂತಿರುಗಲಿಲ್ಲ. ಬಾಟನು ಎಲ್ಲರನ್ನೂ ಕೊಂದು ಈಜಿಪ್ಟ್ ರಾಜನಿಗೆ ಸಮಾಚಾರವನ್ನು ಹೇಳುವುದಕ್ಕಾಗಿ ಒಬ್ಬನನ್ನು ಮಾತ್ರ ಉಳಿಸಿದ್ದನು. ಫೇರೋ ಚಕ್ರವರ್ತಿಯು ಅವನಿಂದ ಸುದ್ದಿಯನ್ನು ತಿಳಿದು ಅನೇಕ ಪಟುಭಟರನ್ನೂ ಮತ್ತು ಅಶ್ವಾರೋಹಿಗಳನ್ನೂ ಪುನಃ ಕಳುಹಿಸಿಕೊಟ್ಟನು. ಈ ಬಾರಿ ತಪ್ಪದೆ ಆ ರೂಪಿಣಿಯನ್ನು ಕರೆತರಬೇಕೆಂದು ಕಟ್ಟಾಜ್ಞೆ ಮಾಡಿದ್ದನು.

ಬಾಟನ ಸತಿಯಾಗಿದ್ದ ಆ ರೂಪಿಣಿಯನ್ನು ಫೇರೋ ಚಕ್ರವರ್ತಿಯು ಮೇಲಾಗಿ ಪ್ರೀತಿಸಿದನು. ಆಕೆಯು ಚಕ್ರವರ್ತಿನಿಯಾದಳು. 'ನಿನ್ನ ಪೂರ್ವ ಪತಿಯ ವಿಚಾರವಾಗಿ ನಮಗೇನಾದರೂ ಹೇಳಲಾರೆಯಾ' ಎಂದು ಫೇರೋ ಚಕ್ರವರ್ತಿಯು ಕೇಳಿದಾಗ ಆಕೆಯು ಅರಿಯಲು ಬಾರದ ಮರ್ಮವನ್ನು ಈ ರೀತಿಯಾಗಿ ತಿಳಿಸಿದಳು.

"ಅಕೇಷಿಯಾ ಕಾಡಿಗೆ ನಿನ್ನ ಜನಗಳನ್ನಟ್ಟು. ಅವರು ಹೋಗಿ ಅಕೇಷಿಯಾ ಮರಗಳನ್ನು ಕಡಿದು ಹಾಕಲಿ; ಅಷ್ಟೇ ಅಲ್ಲ, ಅದರೊಳಗೆ ಎತ್ತರವಾಗಿರುವ ಮರವನ್ನು ತುಂಡು ತುಂಡಾಗಿ ಕತ್ತರಿಸಲಿ." ಫೇರೋ

ಚಕ್ರವರ್ತಿಯು ಅಕೇಷಿಯಾ ಮರಗಳನ್ನು ಕತ್ತರಿಸುವ ಸಲುವಾಗಿ ಕೊಡಲಿ ಕುಡುಗೋಲು ಮಚ್ಚುಗಳ ಸಮೇತ ತನ್ನವರನ್ನು ಕಳುಹಿಸಿಕೊಟ್ಟನು. ಅವರು ಅಕೇಷಿಯಾ ಮರಗಳನ್ನೆಲ್ಲಾ ಕಡಿದುಹಾಕಿ ಬಾಟನ ಆತ್ಮವು ಅಡಗಿದ್ದ ಹೂವಿನ ಸಮೇತ ಹಿರಿಯದಾದ ಅಕೇಷಿಯಾ ಮರವನ್ನು ಸಹ ಕೆಳಗುರುಳಿಸಿ ನುಚ್ಚುನೂರಾಗಿ ಕತ್ತರಿಸಿ ಚೆಲ್ಲಿ ಕೊಟ್ಟರು. ಬಾಟನು ಕೆಳಗುರುಳಿಬಿದ್ದು ನೆಲಕ್ಕೊರಗಿ ಮಡಿದನು.

೬

ಮಾರನೆಯ ದಿವಸ ಕಣ್ಣಿಟ್ಟು ಭೂಮಿಯನ್ನು ನೋಡುವವರಿಗೆ ಅಕೇಷಿಯಾ ಕಾಣಿಸದಾಗಿತ್ತು. ಅಣ್ಣ ಅನ್ಪುವು ದಿನ ಮುಗಿದು ಸಂಜೆಯವೇಳೆಗೆ ತನ್ನ ಮನೆಯನ್ನು ಹೊಕ್ಕನು. ಕೈಕಾಲು ತೊಳೆದನು. ಊಳಿಗದವನು ಒಂದು ಬಟ್ಟಲು ಮದ್ಯವನ್ನು ಕುಡಿಯಲು ಕೊಟ್ಟನು. ಆ ಬಟ್ಟಲಿನ ಮದ್ಯವು ಕದಡಿಹೋಗಿ ಬಹಳವಾಗಿ ಕದಲಾಡಿತು. ಇನ್ನೊಬ್ಬನು ಇನ್ನೊಂದು ಬಟ್ಟಲು ಸಾರಾಯಿಯನ್ನು ಕುಡಿಯಲು ಕೊಟ್ಟನು. ಅದು ಕೆಟ್ಟ ವಾಸನೆಯನ್ನು ಹರಡಿತು. ತಕ್ಷಣವೇ ಅನ್ಪು ಆ ಬಟ್ಟಲುಗಳನ್ನು ಅಲ್ಲಿಯೇ ಬಿಸುಟು ತನ್ನ ಕೈಕೋಲನ್ನು ತೆಗೆದುಕೊಂಡು, ಚಪ್ಪಲಿಗಳನ್ನು ಹಾಕಿಕೊಂಡನು. ಆಳುಗಳು ಬಟ್ಟೆಬರೆಗಳನ್ನು ಕೊಟ್ಟರು. ಯುದ್ಧದ

ತೊಡವುಗಳನ್ನು ತೊಡಿಸಿ ಆಯುಧಗಳನ್ನು ಕೈಲಿಟ್ಟರು.

ಅನ್ಪು ಅಕೇಷಿಯಾ ಕಣಿವೆಯನ್ನು ತಲಪಿದನು. ಅಲ್ಲಿ ತಮ್ಮ ಬಾಟನ ಗೋಪುರವನ್ನು ಹೊಕ್ಕು ನೋಡಿದನು. ಚಾಪೆಯ ಮೇಲೆ ಬಾಟನು ಒರಗಿದ್ದನು. ಪ್ರಾಣವು ಹಾರಿಹೋಗಿತ್ತು.

ಚಿಕ್ಕ ತಮ್ಮನು ಸತ್ತು ಮಲಗಿರುವುದನ್ನು ನೋಡಿ ಬಹುವಾಗಿ ದುಃಖಿಸಿದನು. ಸ್ವಲ್ಪ ಸಮಾಧಾನವಾದ ಮೇಲೆ ತಮ್ಮನನ್ನು ಹೊತ್ತುಕೊಂಡು ಅಕೇಷಿಯಾ ಮರಗಳ ಕಾಡಿನಲ್ಲೆಲ್ಲಾ ತಿರುಗಿದನು. ಸಂಜೆಯ ವೇಳೆ ಮತ್ತು ಮುಂಜಾನೆಪೊತ್ತು ಆತನು ಓಡಿಯಾಡುವ ಜಾಗಗಳಲ್ಲೆಲ್ಲಾ ತಡಕಾಡಿದನು.

ಮೂರು ವರ್ಷಗಳು ಕಳೆದುಹೋದುವು. ಬಾಟನ ಆತ್ಮವು ಸಿಕ್ಕಲಿಲ್ಲ. ನಾಲ್ಕನೆಯ ವರ್ಷ ಹುಡುಕುವುದಕ್ಕೆ ಪ್ರಾರಂಭಿಸಿದಾಗ ಈಜಿಪ್ಟಿಗಾದರೂ ತಿರುಗೋಣವೆಂದು ಯೋಚಿಸಿದನು. ಮಾರನೆಯ ಬೆಳಗ್ಗೆ ಹೊರಟೇ ಹೋಗುವೆನೆಂದು ತನ್ನ ಹೃದಯಾರ ಭಾವಿಸಿದನು.

ರಾತ್ರಿ ಕಳೆಯಿತು. ನೆಲವೆಲ್ಲ ಬೆಳಕಾಯಿತು. ಮಾರನೆಯ ದಿನ ತಲೆದೋರಿತು. ಅನ್ಪು ಅಕೇಷಿಯಾ ಕಾಡಿನಲ್ಲಿ ಅಲೆದಾಡುತ್ತಿದ್ದನು. ಬಾಟನ ಆತ್ಮವು ಸಿಕ್ಕಿರಲಿಲ್ಲ. ಅದನ್ನು ಹುಡುಕುವುದರಲ್ಲಿಯೇ ಮನವಿಟ್ಟಿದ್ದನು. ಸಂಜೆಯಾಯಿತು. ಮತ್ತೆ ಹುಡುಕಿದನು. ಆಗ ಒಂದು ಅಕೇಷಿಯಾ ಬೀಜವು ಕಣ್ಣಿಗೆ ಬಿತ್ತು.

ಅನ್ನು ಆ ಬೀಜವನ್ನು ತೆಗೆದುಕೊಂಡು ಬಂದನು. ಬಾಟನ ಗೋಪುರದಲ್ಲಿ ಆ ರಾತ್ರಿ ತಂಗಿದನು. ಆ ಬೀಜವನ್ನು ಒಂದು ಬಟ್ಟಲು ತಣ್ಣೀರಿನಲ್ಲಿಟ್ಟನು. ಅದೇ ಬಾಟನ ಆತ್ಮವಾಗಿತ್ತು. ಬೀಜವು ನೀರನ್ನೆಲ್ಲಾ ಹೀರಿಕೊಂಡಿತು. ಬಾಟನ ಆತ್ಮಕ್ಕೆ ತಣಿವಾಯಿತು. ಅವನ ದೇಹವೆಲ್ಲಾ ಕಂಪಿಸಿತು. ಬಾಟನು ತನ್ನ ಅಗ್ರಜನನ್ನು ಕಣ್ಣಿಟ್ಟು ನೋಡಿದನು. ಆತ್ಮವು ಮಾತ್ರ ಬಟ್ಟಲಲ್ಲಿಯೇ ಇತ್ತು. ಆಗ ಅನ್ನು ಆ ಬಟ್ಟಲ ತಣ್ಣೀರನ್ನು ಬಾಟನಿಗೆ ಕುಡಿಯಲು ಕೊಟ್ಟನು. ತಣ್ಣೀರು ಒಡಲಿಗೆ ಹೋದೊಡನೆಯೇ ಆತ್ಮವು ತನ್ನ ಪೂರ್ವಸ್ಥಾನವನ್ನು ಹೊಕ್ಕಿತು. ಜೀವಶಕ್ತಿಯು ಬಂದು ಎಂದಿನಂತೆಯೇ ಬಾಟನಿಗೆ ಎಚ್ಚರವಾಗಿ ಅಣ್ಣನನ್ನು ತಬ್ಬಿಕೊಂಡನು. ಅಣ್ಣ ತಮ್ಮಂದಿರು ಬಹಳ ಹೊತ್ತು ಮಾತನಾಡಿದರು.

ಬಾಟನು ಹಿರಿಯಣ್ಣನಿಗೆ ಹೀಗೆಂದನು. "ನೋಡಣ್ಣ ನಾನು ಇನ್ನು ಮುಂದೆ ದೊಡ್ಡದೊಂದು ಗೂಳಿಯಾಗುವೆನು. ಆ ಗೂಳಿ ಒಳ್ಳೆ ಸುಳಿಗಳಿಂದ ಕೂಡಿ ಸಲಕ್ಷಣವಾಗಿರುತ್ತದೆ. ಅದರ ಇತಿಹಾಸವು ಇನ್ನಾರಿಗೂ ಗೊತ್ತಿರುವುದಿಲ್ಲ. ಗೂಳಿಯಾದ ನನ್ನ ಬೆನ್ನಮೇಲೆ ನೀನು ಕುಳಿತುಕೊ. ಬೆಳಗಾಯಿತೆನ್ನುವ ವೇಳೆಗೆ ನನ್ನ ಪೂರ್ವ ಸತಿ ಇರುವಲ್ಲಿಗೆ ಕರೆದೊಯ್ಯುವೆನು. ನಾನು ಅವಳಿಗೆ ಕೆಲವು ಮಾತುಗಳನ್ನು ಹೇಳ

ಬೇಕಾಗಿದೆ. ಗೂಳಿಯ ಸಮೇತನಾಗಿ ಅರಮನೆಗೈದಿದ ನಿನಗೆ ಬಹಳ ಉಪಚಾರವಾಗುವುದು. ಬೆಳ್ಳಿ ಭಂಗಾರದ ಸುರಿಮಳೆಯಾಗುವುದು. ಫೇರೋ ಚಕ್ರವರ್ತಿಯು ನಮ್ಮನ್ನು ಬಹಳವಾಗಿ ಮೆಚ್ಚುವನು. ಈಜಿಪ್ಟ್ ದೇಶ ವೆಲ್ಲಾ-ಮೆಚ್ಚಿ ವೈಮರೆತು ಹಬ್ಬಮಾಡಿ ಆನಂದಿಸುವರು. ಇಷ್ಟಾದ ಮೇಲೆ ನೀನು ನಿನ್ನ ಹಳ್ಳಿಗೆ ಹೊರಡು."

ಮಾರನೆಯ ದಿನ 'ರಾ' ಉದಯಿಸಿದನು. ಬಾಟನು ತನ್ನ ಮಾತಿನಂತೆ ಗೂಳಿಯಾಗಿ ಬಂದು ಅನ್ನು ವಿನಮುಂದೆ ನಿಂತುಕೊಂಡನು. ಅನ್ನು ಗೂಳಿಯ ಬೆನ್ನಿನ ಮೇಲೆ ರಾತ್ರಿ ಕಳೆದು ಮುಂಜಾವಿನವರೆಗೆ ಕುಳಿತಿದ್ದನು ಫೇರೋ ಚಕ್ರವರ್ತಿಯ ಅರಮನೆಯು ಸಮೀಪಿಸಿತು. ಬಾಗಿಲಾಳುಗಳು ಚಕ್ರವರ್ತಿಗೆ ಆ ಅದ್ಭುತವಾದ ಗೂಳಿಯ ವಿಷಯವನ್ನು ತಿಳಿಸಿದರು. ಆತನಾದರೊ ಬಹಳ ಸಂತೋಷದಿಂದ ಅನ್ನುವನ್ನೂ ವೃಷಭವನ್ನೂ ಎದುರುಗೊಂಡನು.

ಅದು ದೈವಿಕವಾದ ಆಶ್ಚರ್ಯವೆಂದು ತಿಳಿದು ಫೇರೋ ಚಕ್ರವರ್ತಿಯು ಆ ವೃಷಭರಾಜನಿಗಾಗಿ ಎಷ್ಟು ಹಣ ಕೇಳಿದರೆ ಅಷ್ಟನ್ನು ಕೊಡುವುದಾಗಿ ಮಾತುಕೊಟ್ಟನು. ದೇಶವೆಲ್ಲಾ ಆ ಗೂಳಿಯನ್ನು ಕೊಂಡಾಡಿತು. ಅನ್ನುವಿಗೆ ಬೆಳ್ಳಿ ಭಂಗಾರಗಳ ಸುರಿಮಳೆಯಾಯಿತು. ಅವೆಲ್ಲ ವನ್ನೂ ಹೇರಿಕೊಂಡು ಅನ್ನುವು ಗೂಳಿಯನ್ನುಳಿದು ತನ್ನ ಗ್ರಾಮವನ್ನು ಸೇರಿದನು.

೭

ಗೂಳಿಯಾದ ಬಾಟನಿಗೆ ಬಹು ಪದಾರ್ಥಗಳನ್ನು ಓದಿಸಿದರು. ಚಕ್ರವರ್ತಿಯು ಆತನ ಊಳಿಗಕ್ಕೆ ಬಹು ಜನಗಳನ್ನು ನೇಮಿಸಿದನು. ಫೇರೋ ಚಕ್ರವರ್ತಿಯು ಆ ಗೂಳಿಯನ್ನು ತನ್ನ ಪ್ರಾಣಕ್ಕಿಂತ ಮಿಗಿಲಾಗಿ ಪ್ರೀತಿಸುತ್ತಿದ್ದನು.

ಹೀಗೆ ಉತ್ಸವದ ದಿನಗಳು ಕಳೆಯುತ್ತಿರಲು ಒಂದು ದಿನ ಗೂಳಿಯು ಅಂತಃಪುರದ ಪವಿತ್ರಸ್ಥಾನವನ್ನು ಹೊಕ್ಕಿತು. ಅಲ್ಲಿ ಚಕ್ರವರ್ತಿನಿಯು ನಿಂತಿದ್ದಳು. ಗೂಳಿಯಾದ ಬಾಟನು ಆಕೆಯ ಸಂಗಡ ಹೀಗೆಂದನು,- "ಕಂಡೆಯಾ ನನ್ನ, ಬದುಕಿ ಬಂದಿದ್ದೇನಲ್ಲಾ ನಾನು!" ಅದಕ್ಕೆ ಚಕ್ರವರ್ತಿನಿ ಅಂದಳು, "ನೀನಾರು ಪುಣ್ಯಾತ್ಮಾ, ದಯಮಾಡಿ ಹೇಳು". ಗೂಳಿ ಉತ್ತರಕೊಟ್ಟಿತು, "ನಾನು ಬಾಟ. ಅಕೇಷಿಯಾ ವನವನ್ನು ಫೇರೋ ಚಕ್ರವರ್ತಿಯ ಕಡೆಯುವರು ಕಡಿಯುತ್ತಿದ್ದರೆ ನೀನು ಸುಮ್ಮನಿದ್ದೆ. ಆಗ ನನ್ನ ಮನಸ್ಸಿಗನ್ನಿಸಿತು: ನನ್ನ ನಿವಾಸವನ್ನು ನಾಶಮಾಡಿದವರು ನನ್ನನ್ನು ಸಹ ಬದುಕಗೊಡುವುದಿಲ್ಲವೆಂದು. ಆದರೆ ನೋಡು ನಾನು ಬದುಕಿದ್ದೇನೆ. ಈ ಗೂಳಿಯೇ ಆ ಬಾಟ." ಈ ಮಾತುಗಳನ್ನು ಕೇಳಿ ಆ ರೂಪಿಣಿಯು ತನ್ನ ಪೂರ್ವಪತಿಯನ್ನು ನೆನೆದಳು. ನಡುಗಿದಳು. ಬೆಚ್ಚಿದಳು. ಆ ಪವಿತ್ರಸ್ಥಾನವನ್ನು ಬಿಟ್ಟು ಹೊರಟುಹೋದಳು.

ಅಂದು ಭೋಜನ ಸಮಯದಲ್ಲಿ . ಬಾಟನ ಪತ್ನಿಯು ಚಕ್ರವರ್ತಿಯನ್ನು ಸಂತೋಷಪಡಿಸಿದಳು. ಬಾಟನ ಪತ್ನಿಯು ಸಮಯುವನ್ನು ನೋಡಿ ಚಕ್ರವರ್ತಿಗೆ ಹೀಗೆಂದಳು. "ನೀವು ನನಗೊಂದು ಮಾತು ಕೊಡಬೇಕು. ದೇವರಾಣೆಗೂ ನಡೆಸಿಯೇ ಕೊಡುವೆನೆಂದು ಹೇಳಬೇಕು. ನನ್ನ ಜೀವದ ಮೇಲಿನ ಆಣೆ, ಮಾಡಿಕೊಡುವೆ ಎನಬೇಕು". ಹೀಗೆ ಮರೆಮಾಚಿ ಮನಮೆಚ್ಚಿಸುವ ಯಕ್ಷಿಣಿಯ ಮಾತುಗಳನ್ನು ಕೇಳಿದ ಚಕ್ರವರ್ತಿಯು ಕಡೆಗೆ ಈ ಮಾತುಗಳನ್ನೂ ಅವಳ ಬಾಯಿಂದ ಕೇಳಿದನು. "ಹೊಸಗೂಳಿಯ ತಸಿಮಾಂಸವನ್ನು ನಾನು ತಿನ್ನುವಂತಾಗಬೇಕು. ಹಾಗಾಗದಿದ್ದರೆ ಆ ಗೂಳಿಯಿಂದ ಇನ್ನೇನು ಪ್ರಯೋಜನ"! ಈ ರೀತಿ ಕೇಳಿಕೊಂಡಳು.

ಅವಳ ಆ ನುಡಿಗಳನ್ನು ಕೇಳಿ ಘೇರೋ ಚಕ್ರವರ್ತಿಯು ಬಲು ದುಃಖಿಸಿದನು. ಅವನ ಹೃದಯಕ್ಕೆ ಪೆಟ್ಟು ಬಿದ್ದಂತಾಯಿತು.

ಮಾರನೆಯ ದಿನ 'ರಾ' ಕಾಣಿಸಿಕೊಳ್ಳುವ ಮುನ್ನವೆ ಗೂಳಿಯ ಮಾಂಸದ ಔತಣವಾಗುವುದೆಂದು ದೇಶದಲ್ಲೆಲ್ಲಾ ಡಂಗುರವಾಯಿತು.

ಚಕ್ರವರ್ತಿಯು ಪ್ರಧಾನ ಕಟುಕರವನನ್ನು ಗೂಳಿಯ ಬಳಿಗೆ ಕಳುಹಿಸಿದನು. ದೇವರ ಹೆಸರಿನಲ್ಲಿ ಗೂಳಿಯ ವಧೆಯಾಯಿತು. ವಾಹಕರ ಹೆಗಲ ಮೇಲೆ

ಇದ್ದಾಗ, ಆ ಗೂಳಿಯು ತನ್ನ ಕತ್ತನ್ನು ಅಲುಗಿಸಿತು. ಆಗ ಎರಡು ತೊಟ್ಟು ರಕ್ತ ಹಾರಿತು. ಹಾಗೆ ಹಾರಿದ ರಕ್ತದ ಎರಡು ತೊಟ್ಟುಗಳು ಫೇರೋ ಅರಮನೆಯ ಎರಡು ಬಾಗಿಲುಗಳ ಮುಂಭಾಗದಲ್ಲಿ ಬಿದ್ದವು. ಒಂದು ತೊಟ್ಟು ಫೇರೋ ಹೆಬ್ಬಾಗಿಲಿನ ಮುಂದೂ, ಇನ್ನೊಂದು ತೊಟ್ಟು ಮತ್ತೊಂದು ಬಾಗಿಲ ಮುಂದೂ ಬಿದ್ದುವು. ಆಕ್ಷಣವೇ ಅಲ್ಲಿ ಎರಡು ಪರ್ಷಿಯ ಮರಗಳು ಹುಟ್ಟಿ ಕೊಂಡವು. ಲಕ್ಷಣದಲ್ಲಿ ಒಂದನ್ನೂ ತೆಗೆದುಹಾಕುವಂತಿ ರಲಿಲ್ಲ. ಕಾಪಿನವನೊಬ್ಬನು ಚಕ್ರವರ್ತಿಗೆ ವರದಿಯೊಪ್ಪಿ ಸಿದನು. "ಪ್ರಭು, ಅಗಸೆ ಬಾಗಿಲುಗಳ ಬಳಿ ಎರಡು ಪರ್ಷಿಯಾ ಮರಗಳು ಹುಟ್ಟಿಕೊಂಡಿವೆ. ಅವು ನಮ್ಮ ನಾಡಿಗೆಲ್ಲಾ ಅಚ್ಚರಿಯಾದವು. ಎರಡೂ ಒಂದೇ ರಾತ್ರಿ ಯಲ್ಲಿ ಹೆಮ್ಮರಗಳಾಗಿ ಬೆಳೆದಿವೆ". ದೇಶವೆಲ್ಲ ನಲಿ ದಾಡಲು, ಪರ್ಷಿಯಾ ಮರಗಳಿಗೆ ಅರ್ಘ್ಯ, ಪೂಜೆ, ಪುರಸ್ಕಾರಗಳಾದುವು.

ಹಲವು ದಿನಗಳನ್ನು ಕಳೆದುದಾಯಿತು. ಒಂದು ದಿನ ಚಕ್ರವರ್ತಿಯು ನೀಲಿಯ ಕಿರೀಟವನ್ನು ಧರಿಸಿ, ಕೊರಳಲ್ಲಿ ಹೂವಿನ ಹಾರಗಳನ್ನು ಹಾಕಿಕೊಂಡು, ಭಂಗಾರದ ರಥವನ್ನು ಏರಿ, ಅರಮನೆಯಿಂದ ಹೊರಟು, ಸುತ್ತಿಕೊಂಡು, ಪರ್ಷಿಯಾ ಮರಗಳೆಡೆಗೆ ಬಿಜಯ ಮಾಡಿಸಿದನು. ಚಕ್ರವರ್ತಿನಿಯು ಕುದುರೆಯ ಮೇಲೆ ಫೇರೋ ಚಕ್ರವರ್ತಿಯನ್ನು ಹಿಂಬಾಲಿಸಿದಳು.

ಚಕ್ರವರ್ತಿ ಚಕ್ರವರ್ತಿನಿಯರು ಪರ್ಷಿಯ ಮರದ ಬುಡದಲ್ಲಿ ವಿಶ್ರಮಿಸಿಕೊಂಡರು. ಆಗ ಆ ಮರವು ತನ್ನ ಪೂರ್ವಪತ್ನಿಗೆ ಹೀಗೆಂದಿತು:"ಎಲೆ ತೋಟ ಗಾತಿಯೆ, ನಾನು ಬಾಟ, ಇಲ್ಲಿದ್ದೇನೆ. ಮರವಾಗಿದ್ದೇನೆ. ದುಷ್ಟರ ಕೈಲಿ ಸೆರೆಯಾಗಿ ದುಷ್ಕೃತ್ಯಗಳಿಗೆ ಒಳಗಾಗಿ ದ್ದೇನೆ. ನನ್ನ ಅಕೇಷಿಯಾ ನಿವಾಸವನ್ನು ಫೇರೋ ಮುಖೇನ ನಾಶ ಮಾಡಿದವರಾರೆಂದು ನಾನು ಬಲ್ಲೆ. ನಾನು ಗೂಳಿಯಾಗಿದ್ದಾಗ ನನ್ನನ್ನು ಕೊಲ್ಲಿಸಿದವರು ಅದಾರೆಂದು ಸಹ ಬಲ್ಲೆ. ನೀನೆ ಅಲ್ಲವೆ!"

ಇದಾದ ಹಲವು ದಿನಗಳ ಮೇಲೆ ಚಕ್ರವರ್ತಿ ನಿಯು ಒಮ್ಮೆ ಫೇರೋವಿಗೆ ತೃಪ್ತಿಯಾಗುವಂತೆ ಊಟಕ್ಕೆ ಬಡಿಸಿದಳು. ಮತ್ತು ಚಕ್ರವರ್ತಿಯನ್ನು ಹೀಗೆ ಕೇಳಿ ಕೊಂಡಳು: "ಪ್ರಭೂ, ಈ ಬಾರಿ ತಾವೊಂದು ಮಾತು ಕೊಡಬೇಕು. ಖಂಡಿತ ನಡೆಸಿಕೊಡುತ್ತೇನೆಂದು ಹೇಳಿ ದರೆ ಹೇಳುತ್ತೇನೆ. ಹೇಳಿರಿ ಮತ್ತೆ." ಚಕ್ರವರ್ತಿನಿಯು ಹೇಳಿದುದಕ್ಕೆ ಚಕ್ರವರ್ತಿ ಅಸ್ತು ಎನ್ನಬೇಕು.

ಈ ರೀತಿ ಆಕೆ ಹೇಳಿದುದನ್ನೆಲ್ಲಾ ಕೇಳಿ ಫೇರೊ ಕಟ್ಟಪ್ಪಣೆ ಮಾಡಿದನು. ಹೆಬ್ಬಾಗಿಲುಗಳಲ್ಲಿರುವ ಎರಡು ಪರ್ಷಿಯಾ ಮರಗಳನ್ನೂ ಕತ್ತರಿಸಿ, ಅವುಗಳಿಂದ ಹಲಗೆ ಗಳನ್ನು ಕೊಯ್ಯುವಂತೆ ಚಕ್ರವರ್ತಿಯ ಅಪ್ಪಣೆಯಾ ಯಿತು. ಹೀಗೆ ಚಕ್ರವರ್ತಿ ಚಕ್ರವರ್ತಿನಿಯರ ಮನಸ್ಸು

ಗಳೊಂದ್ಹಾದ ಮೇಲೆ ಆಳುಗಳು ತಕ್ಕ ಆಯುಧಗಳನ್ನು ಕೊಂಡುಹೋಗಿ ಪರ್ಷಿಯಾ ಮರಗಳನ್ನು ಕತ್ತರಿಸುತ್ತಿದ್ದರು.

ಮನಸ್ಸು ನಿಲ್ಲದ ಚಕ್ರವರ್ತಿನಿಯು ಮರಗೆಲಸದವರ ಬಳಿಯಲ್ಲಿಯೇ ನಿಂತಿದ್ದಳು. ಆಕೆಯ ಮನಸ್ಸು ತೃಪ್ತಿಪಡುವ ರೀತಿಯಲ್ಲಿ ಕೆಲಸಗಳು ನಡೆಯುತ್ತಿರುವಾಗ ಒಂದು ಸಿಬರಿನ ಚೂರು ಚಕ್ರವರ್ತಿನಿಯ ಬಾಯೊಳಕ್ಕೆ ಹಾರಿತು. ಅದನ್ನು ಅವಳು ನುಂಗಿದಳು.

೯

ಹಲವು ದಿನಗಳ ಬಳಿಕ ಚಕ್ರವರ್ತಿನಿಯು ಒಬ್ಬ ಮಗನನ್ನು ಹೆತ್ತಳು. ಫೇರೊ ಚಕ್ರವರ್ತಿಯು ಕುಮಾರನ ಉದಯದ ಶುಭವರ್ತಮಾನವನ್ನು ಕೇಳಿ ಸಂತೋಷದಿಂದ ನೈಮರೆತನು. ರಾಜ್ಯವೆಲ್ಲಾ ಸಂತೋಷದಲ್ಲಿ ಮುಳುಗಿತು.

ರಾಜನು ಕುಮಾರನ ವರ್ಧಂತಿಯ ಹಬ್ಬವನ್ನು ವಿಜೃಂಭಣೆಯಿಂದ ನಡೆಸಿದನು. ನವಕುಮಾರನಿಗೆ ಉತ್ತಮವಾದ ಹೆಸರನ್ನಿಡಬೇಕೆಂದು ಬಯಸಿ "ಖುಷ್ ರಾಜ"ನೆಂದು ಕರೆದನು.

ಹಲವು ವರ್ಷಗಳು ಕಳೆದ ಮೇಲೆ ಚಕ್ರವರ್ತಿಯು ಯುವರಾಜ ಕುಮಾರನನ್ನು ತನ್ನ ಚಕ್ರಾಧಿಪತ್ಯಕ್ಕೆಲ್ಲಾ, ಹಕ್ಕುದಾರನನ್ನಾಗಿ ಮಾಡಿದನು.

ಮತ್ತೆ ಹಲವು ದಿನಗಳ ನಂತರ ಫೇರೋ ಪ್ರಭುವು ಪರಂಧಾಮಕ್ಕೆ ತೆರಳಿದನು.

ಫೇರೊ ಚಕ್ರವರ್ತಿಯಾಗಬೇಕಾಗಿದ್ದ ಕುಮಾರನು ಹೀಗೆ ಅಪ್ಪಣೆಮಾಡಿದನು: "ಫೇರೋ ಆಸ್ಥಾನಕ್ಕೆ ಸಂಬಂಧಪಟ್ಟ ಮಹಾಪ್ರಧಾನಿಗಳನ್ನೆಲ್ಲಾ ಬರಮಾಡಿ. ನಡೆದುದನ್ನೆಲ್ಲಾ ನಾನು ಅವರಿಗೆ ಅರುಹಬೇಕು."

ಕಡೆಗೆ ಮಂತ್ರಿಗಳು ಚಕ್ರವರ್ತಿನಿಯನ್ನು ಬರಮಾಡಿದರು. ಫೇರೋ ಕುಮಾರನಾದ ಬಾಟನು ಆಕೆಯ ಕೃತ್ಯಗಳ ಮೇಲೆ ತನ್ನ ತೀರ್ಪನ್ನಿತ್ತನು. ಅದನ್ನು ಎಲ್ಲರೂ ಒಪ್ಪಿದರು.

ಅನಂತರ, ಆತನ ಅಣ್ಣನಾದ ಅನ್ಪುವನ್ನು ಅಲ್ಲಿಗೆ ಕರೆತಂದರು. ಫೇರೋ ಆದ ಬಾಟನು ತನ್ನ ಚಕ್ರಾಧಿಪತ್ಯವನ್ನೆಲ್ಲಾ ಅನ್ಪುವಿಗೆ ಬಿಟ್ಟುಕೊಟ್ಟನು. ಮೂವತ್ತು ವರ್ಷಕಾಲ ಅವನು ರಾಜ್ಯಭಾರ ಮಾಡಿದನು. ಫೇರೊ ಆದ ಅನ್ಪುವು ದೇಹವನ್ನು ತ್ಯಜಿಸಿದಾಗ, ತಮ್ಮ ಬಾಟನು ಸಿಂಹಾಸನವನ್ನು ಅಲಂಕರಿಸಿದನು.

(ಅನೀನ ಕರಣಿಕನು ಬರೆದಿಟ್ಟಿರುವ ಈ ಗ್ರಂಥದ ಮೇಲೆ ಯಾರಾದರೂ ಅಪವಾದವನ್ನು ಹೊರಿಸಿದರೆ ಅಂಥವರನ್ನು ಕಾಹುತಿಯು ಶಿಕ್ಷಿಸದೆ ಬಿಡುವುದಿಲ್ಲ.)

---

## ಮಸೀದಿಯನ್ನು ಎಲ್ಲಿ ಕಟ್ಟಿದರು ?

ರಹೀಂ :—ಎಚ್ಚರವಾಗಿದ್ದೀಯ ? ಹುಡುಗರೆಲ್ಲಾ ಮಲಗಿದ್ದಾರೆಯೋ ?

ಗುಲಾಬಿ :—ಏನು ವಿಚಾರ ? ಎಲ್ಲರೂ ಸುಖವಾಗಿ ಮಲಗಿ ಕನಸು ಕಾಣುತ್ತಿದ್ದಾರೆ.

ರಹೀಂ :—ಒಳ್ಳೇ ಕನಸು ! ಗುಲಾಬೀ, ಕನಸು!

ಗುಲಾಬಿ :—ಅದೇನು ಹೇಳಿರಿ ! ಏನು ಕನಸು ? ಒಳ್ಳೆಯ ಕನಸಾದ ದಿನ ಒಳ್ಳೆಯ ಕೆಲಸ ಮಾಡಬೇಕಂತೆ ! ಕನಸೇನು ?

ರಹೀಂ :—ಅಣ್ಣಾ ಕರೀಮನ ಮನೆಗೂ ನಮ್ಮ ಮನೆಗೂ ನಡುವೆ ಕಲೀಫರು ಬಂದು ನಿಂತು ಮಸೀದಿ ಕಟ್ಟಿಸುತ್ತ ನಿಂತಿದ್ದರು. ಎಂಥಾ ಬಂಗಾರದಂಥ ಕನಸು !

ಗುಲಾಬಿ :—ಆಹಾ ! ಏನು ಕನಸು! ನಾನು ಇದ್ದೆನೆ ಅಲ್ಲಿ ? ನಿಮ್ಮ ಕನಸಿನಲ್ಲಿ ?

ರಹೀಂ :—ನೀನಿದ್ದಂತೆ ನೆನಪಿಲ್ಲ,ಮುಂದೆ ಕೇಳು. ಕಟ್ಟಿ ಮುಗಿದಮೇಲೆ ನಮಾಜು ಮಾಡಲು ಕರೆಯುತ್ತಿದ್ದರು. ಎಷ್ಟೋ ಬಾರಿ ಜನರು ಕೂಡಿ ಬೇಡಿ ಮನೆಗೆ ನಡೆದರು. ಇನ್ನೂ ಕರೆಯುತ್ತಿರುವರು ಪ್ರಾರ್ಥನೆಗೆ......

ಗುಲಾಬಿ :—ಹಾಗಾದರೆ ಹೋಗಿ.........

ರಹೀಂ :—ಎಲ್ಲ ಕನಸಿನಲ್ಲಿ ಎಂದೆನಲ್ಲವೆ ? ಹಾಗಾದರೂ ನನ್ನ ಕಿವಿಯಲ್ಲಿ ಕೂಗು ಕೇಳಿಸುತ್ತದೆ 'ಅಮೀನ್ ! ಅಮೀನ್ ! ಅಮೀನ್ !'

ಗುಲಾಬಿ .—ಎಂಥಾ ಕನಸು !

ರಹೀಂ :—ಈ ದಿನ ಏನಾದರೂ ಒಳ್ಳೆಯ ಕೆಲಸ ಮಾಡಲೇಬೇಕು.

ಗುಲಾಬಿ :—ಏನು ಮಾಡುವಿರಿ ? ಯಾವುದಕ್ಕೂ ಬೆಳಗಾಗಬೇಡವೆ ?

ಇಲ್ಲ, ಬೆಳಗಾಗಬೇಕಾದುದೇ ಇರಲಿಲ್ಲ. ಆಗಲೆ ಮಾಡಬಹುದಾಗಿತ್ತು ಆ ಒಳ್ಳೆಯ ಕೆಲಸವನ್ನ. ರಹೀಂ ಸಾಹೇಬನ ಅಣ್ಣನೇ ಕರೀಂಸಾಹೇಬ. ಆತನಿಗೆ ಹೆಂಡತಿ, ಮಗಳು, ಮಗ, ಯಾರೂ ಇರಲಿಲ್ಲ. ಒಳ್ಳೆಯ ಕೆಲಸ ಏನು ಮಾಡಬೇಕಾದರೂ ಸರಿ, ಇಂದೇ ಮಾಡಿಬಿಡಬೇಕು. ಅದೂ ಸಹ ಕರೀಂಸಾಹೇಬನ ಪರವಾಗಿ ಏನಾದರು ಒಳ್ಳೆಯುದನ್ನು ಮಾಡಬೇಕು.

ಗುಲಾಬಿ :—ನಿಮ್ಮ ಅಣ್ಣ ಕರೀಂಸಾಹೇಬರು ಮುದುಕರಾಗುತ್ತ ಬಂದರು. ಕೈಲಿ ಸಾಗದೋ ಏನೋ !

ರಹೀಂ :—ಹೌದು; ನೋಡು ಹೊಲದ ಕೆಲಸವೂ ಸಹ ಕೈಲಿ ಸಾಗದು. ಭಾರಣ್ಣ, ನನ್ನ ಸಂಗಡ ಇದ್ದು ಬಿಡು ಎಂದರೆ ಬರುವಲ್ಲ.

ಗುಲಾಬಿ:—ಅವರಿಗೆ ಅನುಕೂಲವಾಗುವ ಹಾಗೆ ಏನು ಮಾಡಿದರೆ ಆದೀತು ?

ರಹೀಂ :—ನಾನು ಬೆಳೆದ ಧಾನ್ಯದಲ್ಲಿ ಅರ್ಧ ದಷ್ಟಾದರೂ ಆತನಿಗೆ ಕೊಟ್ಟುಬಿಡೋಣವೆ ?

ಗುಲಾಬಿ :—ಕೊಡಿರಿ ಪಾಪ. ಆದರೆ ಅವರು ತೆಗೆದುಕೊಳ್ಳುವರೆ ?

ರಹೀಂ :—ಕೊಡುವ ವಿಧಾನ ಬೇರೆ ಇದೆ. ಅದನ್ನೇ ಈಗ ಬೆಳಗಾಗುವ ಮುನ್ನ ಆರಂಭಿಸುತ್ತೇನೆ.

ಅದು ಬಹಳ ಗುಟ್ಟಿನ ವಿಚಾರವಾಗಿತ್ತು. ಆದ್ದ ರಿಂದ ಕಿವಿಯಲ್ಲಿ ಹೇಳಿದ. ಗುಲಾಬಿ ಬೀಬಿಗೆ ಸಹ ಸರಿಯೆಂದು ಕಾಣಿಸಿತು. ಸರಿ, ಹಾಗೇ ಮಾಡುತ್ತ ಇದ್ದನು.

ಗುಟ್ಟಿನ ವಿಚಾರವಷ್ಟೆ. ಅದನ್ನು ನಿಮಗೆ ನಾನು ಈಗ ಹೇಳಬಾರದು. ಆಮೇಲೆ ಹೇಳುತ್ತೇನೆ. ಆಗ ಬಹುದೋ ?

ಏನು ಆಗದೇನು ? ಹಟಮಾಡಿದರೆ ಇನ್ನೇನು ಗತಿ. ಹೇಳಿಬಿಡುತ್ತೇನೆ, ಕೇಳಿರಿ ; ಆದರೆ ಇನ್ನೊಂದು ಬಗೆ ಯಾಗಿ ಸೂಚಿಸುತ್ತೇನೆ.

ಇತ್ತ ಕರೀಂಸಾಹೇಬನಿಗೆ ಕನಸಾಯಿತು. ತಮ್ಮ ನಾದ ರಹೀಂಸಾಹೇಬನ ಮಕ್ಕಳು ಮರಿಯೆಲ್ಲ ಹಸಿವು ಹಸಿವೆಂದು ಅಳುತ್ತ ಅರಚುತ್ತ ಇದ್ದಾರೆ. ರಹೀಂಸಾಹೇ

ಬನು ಮರಣ ಹೊಂದಿದ್ದಾನೆ. ಥಿಗ್ಗನೆ ಎದ್ದನು.' ರಹೀ
ಮನ ಮನೆಯ ಕಡೆಗೆ ಓಡಿಹೋದನು. ಇನ್ನೂ ಬೆಳ್ಳಿ
ಚಿಕ್ಕಿ ಮೇಲೆ ಬಂದಿರಲಿಲ್ಲ. ತಮ್ಮ ರಹೀಮನ ಮನೆ
ಯಲ್ಲಿ ಎಲ್ಲರೂ ಸುಖವಾಗಿ ಮಲಗಿದ್ದಾಗಿತ್ತು.
ಹಿಂತಿರುಗಿ ಬಂದನು. ಚಾಪೆ ಹಾಸಿದನು. ಕೈಕಾಲು
ತೊಳೆದು ಬಂದು ಕುಳಿತುಕೊಂಡನು. ಮಂಡಿಯೂರಿ
ದನು. ಹೀಗೆ ಬೇಡಿದನು : 'ಖುದಾ ! ನೀನಿಲ್ಲದ ಜಾಗ
ವಿಲ್ಲ ; ನೀನರಿಯದ ವಿಷಯವಿಲ್ಲ. ಹೀಗೆ ಕೆಟ್ಟ ಕನಸಾ
ಯಿತು. ನನ್ನ ತಮ್ಮನಿಗೆ ಕಷ್ಟ ಬರದೇ ಇರಲಿ ತಂದೆ !
ಆ ಮಕ್ಕಳು ಮರಿಗಳು ಅಳುವುದನ್ನು ಕೇಳಲಾರೆ. ನನ್ನ
ಹೊಲದಲ್ಲಿ ಅದೆಷ್ಟು ತೆನೆ ಬಿಟ್ಟಿದೆ ಈ ವರ್ಷ. ಖರ್ಜೂ
ರದ ಫಸಲು ಇನ್ನೆಷ್ಟು ಬಂದಿದೆ ಮನೆಗೆ. ತಪ್ಪುಮಾಡಿ
ಬಿಟ್ಟೆನೋ ಏನೋ ಕಾಣೆ. ಒಳ್ಳೆಯ ಹೊಲವನ್ನೂ
ಖರ್ಜೂರ ವನವನ್ನೂ ನಾನೇ ತೆಗೆದು ಕೊಂಡುಬಿಟ್ಟೆನೋ
ಏನೋ ಕಾಣೆ. ಏನು ಮಾಡಲಿ ಈಗ ? ನಾನೇನು ಕೊಡ
ಹೋದರೂ ಆತನು ತೆಗೆದುಕೊಳ್ಳುವುದಿಲ್ಲ. ಆದ್ದರಿಂದ
ಪ್ರಭು, ನನ್ನ ಧಾನ್ಯದಲ್ಲಿ ಅರ್ಧವನ್ನು ಅವನಿಗೆ ಕೊಟ್ಟು
ಬಿಡುತ್ತೇನೆ. ಎಲ್ಲರೆದುರು ಕೊಡಹೋದರೆ ತೆಗೆದು
ಕೊಳ್ಳುವುದಿಲ್ಲ ಆ ನನ್ನ ತಮ್ಮ ರಹೀಂಸಾಹೇಬ. ಆದ್ದ
ರಿಂದ ನಿತ್ಯ ಬೆಳಗಿನ ಜಾವದಲ್ಲಿ ಒಂದೊಂದು ಹೊರೆ ತೆನೆ
ಯನ್ನೇ ಹೊತ್ತುಕೊಂಡು ಹೋಗಿ, ರಹೀಮನ ರಾಶಿಗೆ
ಸೇರಿಸಿಬರುತ್ತೇನೆ. ಇದೋ ಖುದಾ! ನಿನ್ನಲ್ಲಿ ಈ ಮಾತು

ಮಡಗಿದ್ದೇನೆ. ನಡೆಸಿಕೊಡು. ಆ ಮಕ್ಕಳು ಹಸಿದು ಅರಚುವ ಕನಸು ಮತ್ತೆ ಆಗದಿರಲಿ ತಂದೆ ! ಈ ಬೇಡಿಕೆ ಯನ್ನು ಸಲ್ಲಿಸಿಕೊಡು.'

ಕರೀಮಣ್ಣನು ಹಿತ್ತಲಿಗೆ ಹೋಗಿ ನೋಡಿದನು. ತೆನೆಮೆದೆಯನ್ನು ಅರ್ಧ ಬೇರೆಯಾಗಿ ಮಾಡೋಣ ವೆಂದನು. ಆದರೆ ಆ ಕತ್ತಲೆಯಲ್ಲಿ ಸಾಧ್ಯವಿರಲಿಲ್ಲ ಆ ಕೆಲಸ. ಈಗ ಒಂದು ಹೊರೆ ಹೊತ್ತುಕೊಂಡು ಹೋಗೋಣ ಎಂದು ಗೋಧಿಯ ತೆನೆಗಳನ್ನು ರಾಶಿ ಮಾಡಿದ್ದ ಮೆದೆಯ ಬಳಿಗೆ ಬಂದನು. ಅಲ್ಲಿ ಬುಡದಲ್ಲಿ ಒಂದು ಸಿವುಡು ಬಿದ್ದಿತ್ತು. ಅದು ಬಲು ಭಾರವಾಗಿತ್ತು. ಸರಿ ಕಾಳು ತುಂಬಿರುವ ದೊಡ್ಡ ತೆನೆಗಳುಳ್ಳ ಈ ಹೊರೆಯೇ ಲೇಸು. ಹೀಗೆಂದು ಹೊರಲಾರದೆ ಹೊತ್ತು ತಂದನು. ರಹೀಂಸಾಹೇಬನ ಮನೆಯ ಹಿತ್ತಿಲುಕಡೆಗೆ ಹೋದನು. ಬೇಲಿಯ ಉದ್ದಕ್ಕೂ ನಡೆದನು. ಬಾಗಿಲು ಬಿಚ್ಚಿದನು. ಒಳಗೆ ಹೋದನು. ಮೆದೆ ಭರ್ತಿಯಾಗಿತ್ತು. ಆದರೆ ಒಂದು ಕಡೆ ಮಾತ್ರ ಒಂದೇ ಸಿವುಡಿಗೆ ಜಾಗ ವಿತ್ತು. ತಾನು ತಂದ ಗೋಧಿ ತೆನೆಯ ಸಿವುಡನ್ನು ಅಲ್ಲಿಗೆ ಇಟ್ಟು 'ಖುದಾ, ನಿನಗೆ ಪ್ರೀತಿಯಾಗಲಿ' ಎಂದು ಹಿಂದೆ ತಿರುಗಿದನು. ಆದರೆ ವಾಪಸು ಬರುವಾಗ್ಗೆ ಮುಳ್ಳು-ಬಾಗಿಲು ಎಳೆದು ಹಾಕುವಾಗ ಒಂದು ಮುಳ್ಳು ಕಾಲಿಗೆ ಚುಚ್ಚಿಕೊಂಡಿತು. ಅದೇನು ಮಾಡೀತು ಮುಕ್ಕ ಎಂದುಕೊಂಡು, ಹಿಂತಿರುಗಿ ಬಂದು ಮಲಗಿದನು.

ಹೀಗೆ ಇತ್ತ ರಹೀಮ, ಅತ್ತ ಕರೀಮ, ಒಬ್ಬರ ಮೆದೆಗೆ ಇನ್ನೊಬ್ಬರು ಗುಟ್ಟಾಗಿ ತೆನೆ ಹೊರೆಗಳನ್ನು ಹೊರುತ್ತಿದ್ದರು. ಇಬ್ಬರ ರಾಶಿಗಳೂ ಕುಂದಿ ಕಡಿಮೆ ಯಾಗಿರಲಿಲ್ಲ. ಇಬ್ಬರಿಗೂ ಆಶ್ಚರ್ಯ. ಎರಡು ರಾಶಿ ಗಳೂ ಭರ್ತಿಯಾಗಿದ್ದುದು ಹೇಗೆ ?

ಕೊಟ್ಟದ್ದು ತನಗೆ !

ಕೊಟ್ಟದ್ದು ತನಗೆ !!

## ಕೊಟ್ಟದ್ದು ತನಗೆ !!!

ಎಂಬ ನುಡಿ ಬರಬರುತ್ತ ದೊಡ್ಡ ದೊಡ್ಡದಾಗಿ ಕಿವಿಗೆ ಕೇಳುತ್ತಲೇ ಇತ್ತು, ಇಬ್ಬರ ಕಿವಿಗೂ. ಹಾಗಾದರೆ ಕೊಟ್ಟು ಮುಗಿಸುವುದು ಇನ್ನು ಹೇಗೆ ? ತಮ್ಮ ತಮ್ಮ ಮನಸ್ಸಿನ ಇಷ್ಟಗಳನ್ನು ಸಲ್ಲಿಸಿಕೊಳ್ಳುವುದಕ್ಕೆ ಇಬ್ಬರಿಗೂ ಬಲು ಕಷ್ಟವಾಗಿತ್ತು.

ಆರು ದಿನಗಳ ನಂತರ ರಹೀಮನು, ಕರೀಮನ ಮನೆಯ ಕಡೆಗೆ ಹೋಗುತ್ತಿದ್ದನು. ರಹೀಮನು ತೆನೆ ಬಡಿಸಿಕೊಳ್ಳಲು, ಕಣಜ ಕಟ್ಟಿಸಿಕೊಳ್ಳಲು ಒಳ್ಳೆಯ ದಿನ ನೋಡಿಸಿ, ಕೂಲಿಯಾಳುಗಳನ್ನು ಬರಹೇಳಬೇಕಾಗಿತ್ತು ಕರೀಂಸಾಹೇಬನು ಜಗುಲಿಯ ಮೇಲೆ ಕುಳಿತಿದ್ದನು. ರಹೀಮನು ಬಂದು ಸಲಾಂ ಮಾಡಿ ಕುಳಿತನು. ಹಾಗೇ ಕಾಲು ಬಳಿ ಕುಳಿತವನು ನೋಡಿದನು. ಅಣ್ಣನ ಬಲ ಗಾಲು ಊದಿತ್ತು.

ರಹೀಂ :—ಅಣ್ಣ ಇದೇನು ಕಾಲು ಊದಿದೆ ?

ಕರೀಂ :—ಏನೋ ಎಂತೋ, ಊದಿದೆ, ಕೀತಿದೆ, ಬಲು ನೋವು.

ರಹೀಂ :—ಎಲ್ಲಿ, ಕಾಲು ನೀಡು ತೆಗೆಯುತ್ತೇನೆ ಮುಳ್ಳಿದ್ದಿರಬಹುದು. ಹಾಂ ! ಕಾಲು ಎಳೆದರೆ ಹೇಗೆ ? ನೋಯಿಸದ ಹಾಗೆ, ಉಫ್ಫೆಂದು ಊದುತ್ತ ತೆಗೆದುಬಿಡುತ್ತೇನೆ.

ಕರೀಂ :—ನೋಯಿಸಬೇಡ, ಹಾಳು ಮುಳ್ಳು ಚುಚ್ಚಿಬಿಟ್ಟಿದೆ ! ತೆಗೆದೆಯಾ, ಐದಾರು ದಿನದಿಂದ ಕಷ್ಟ ಕೊಡುತ್ತಿದೆ, ಆ ಮುಳ್ಳು.

ರಹೀಂ :—ಎಷ್ಟು ಕೀವು ನೋಡಿದೆಯಾ. ಕರೀ ಮುಳ್ಳು ! ಇದು ಎಲ್ಲಿ ಇತ್ತಣ್ಣ ಈ ಮುಳ್ಳು ? ಇನ್ನೆರಡು ದಿನ ಎಲ್ಲಿಯೂ ಓಡಿಯಾಡಬೇಡ. ಹುಡುಗರ ಕೈಲಿ ಬುತ್ತಿ ಕಳಿಸುತ್ತೇನೆ. ನಾಳೆ ಬಿಟ್ಟು ನಾಡಿದ್ದು ಸಂಜೆಗೆ ತೆನೆ ಬಡಿಸಿಬಿಡುತ್ತೇನೆ.

ಎಂದು ಹೇಳಿ ಹೊರಟು ಬಂದನು ರಹೀಮು ಸಾಹೇಬ. ಆದರೆ ಆ ಮುಳ್ಳು ಎಲ್ಲಿತ್ತೆಂದು ರಹೀಮನಿಗೆ ಆಶ್ಚರ್ಯ. ಅದು ತನ್ನ ಹೊಲ ಅಥವ ಹಿತ್ತಿಲಲ್ಲಿ ಇರಬೇಕಾದ ಮುಳ್ಳು. ಕರೀಮನ ಕಾಲಿಗೆ ಚುಚ್ಚಿದ ಮುಳ್ಳು ಎಲ್ಲಿಯದು ಎಂದು ರಹೀಮನು ಯೋಚಿಸುತ್ತ ಮನೆಗೆ ಬಂದನು.

ಅತ್ತ ಕರೀಮನು ಯೋಚಿಸುತ್ತ ಕುಳಿತನು: ಗೊತ್ತಾಗಿಹೋಯಿತೇ ಹಾಗಾದರೆ ರಹೀಮನಿಗೆ! ಹೇಗೆ ತಾನೆ ತೆನೆ ಸಿವುಡುಗಳನ್ನು ಸಾಗಿಸುವುದು! ನಾಳೆ ಬಿಟ್ಟು ನಾಡಿದ್ದು ತೆನೆ ಬಡಿದು ಬಿಡುವನಲ್ಲ! ಏನು ಗತಿ? ಹೀಗೆಂದುಕೊಳ್ಳುತ್ತ ಇದ್ದನು.

ಎಂಟನೆಯ ದಿನ ಬೆಳಗಿನ ಮುನ್ನ ಕರೀಮನು ಎರಡು ಹೊರೆಗಳನ್ನು ಹೊತ್ತು ತಂದನು. ದಾರಿಯಲ್ಲಿ ಕಾಲಿಗೆ ಕಟ್ಟಿದ ಬಟ್ಟೆ ಸಡಿಲವಾಗಿ ಬಿತ್ತು. ಗೋಧಿಯ ತೆನೆಯ ಸಿವುಡುಗಳನ್ನು ಅಲ್ಲೇ ಹಾಕಿ ಬಟ್ಟೆ ಕಟ್ಟಿ ಕೊಳ್ಳುತ್ತ ಇದ್ದನು. 'ಅಯ್ಯೋ ಬೆಳಗಾಗುತ್ತ ಬಂದಿತಲ್ಲ' ಎಂದು ಆ ಎರಡು ಸಿವುಡುಗಳನ್ನೂ ಹೊತ್ತು ಕೊಂಡು ಒಂದು ಹೆಜ್ಜೆ ಮುಂದೆ ಇಟ್ಟನು.

ಅಷ್ಟರಲ್ಲೇ ಇನ್ನಾರೊ ಒಬ್ಬರು ಇನ್ನೆರಡು ಸಿವುಡು ತೆನೆಗಳನ್ನು ಹೊತ್ತುಕೊಂಡು ಅತ್ತಕಡೆಯಿಂದ ಬಂದರು. ಅದಾರು? ತಮ್ಮನಾದ ರಹೀಮಸಾಹೇಬ. ಕಡೆಯ ದಿನ ಅಣ್ಣನ ಮೆದೆಗೆ ಎರಡಾದರೂ ತೆನೆ ಸಿವುಡುಗಳನ್ನು ಸೇರಿಸಿ ಬಂದು ಅನಂತರ ಕಾಳು ಬಡಿದುಕೊಂಡರಾಯಿ ತೆಂದು ಬರುತ್ತಲಿದ್ದಾನೆ.

ಕರೀಮಸಾಹೇಬ :—ಯಾರಪ್ಪ ಅದು ? ರಹೀಂ ಸಾಹೇಬನ ಹಿತ್ತಿಲಬಾಗಿಲಿಂದ ಬಂದಹಾಗಿದೆ. ಏನಪ್ಪ ಕಳ್ಳತನ ಅದು ? ಮಕ್ಕಳು ಮರಿ ಉಳ್ಳಾತನ

ಕಾಳು ಕಧಿಯಬಾರದಪ್ಪ. ಅದನ್ನು ಅಲ್ಲಿ ಹಾಕಿ ಬಾ, ಬೇಕಾದರೆ ನನ್ನ ಸಿವುಡು ಇವೆರಡನ್ನೂ ತೆಗೆದುಕೋ, ನಾಳೆ ಬಾ ಇನ್ನೆರಡು ಕೊಡುತ್ತೇನೆ.

ರಹೀಮುಸಾಹೇಬ :—ಅಣ್ಣ! ಕರೀಮುಸಾಹೇಬ! ನಾನೇ ಬಂದೆ ರಹೀಮು.

ಕರೀಮು :—ಎಲ್ಲಿಗೆ ಒಯ್ಯುವಿ ಈ ಗೋಧಿಯೆಲ್ಲ ?

ರಹೀಮು :—ದೇವರು....ಖುದಾ ಖಾವಂದ ಇರುವಲ್ಲಿಗೆ. ನೀನೇಕೆ ಬಂದೆ ಇಲ್ಲಿಗೆ ? ಕಾಲು ನೋವಾಗಿದೆ. ಇಂಥಾ ನೋವಿನಲ್ಲಿ ಎಲ್ಲಿಗೆ ಹೊರಟೆ ನೀನು ? ಅಣ್ಣಾ, ಸುಳ್ಳು ಹೇಳಬೇಡ. ಹೇಳು ! ಹೇಳು !

ಕರೀಮು .—ಎಲ್ಲಿಗೋ ಹೊರುತ್ತಲಿದ್ದೆ. ಈ ಹಾಳು ಕಾಲು ಈ ದಿನ ಬಹುವಾಗಿ ಬಾಧೆ ಕೊಟ್ಟಿತು.

ಈ ವೇಳೆಗೆ ಜಹಾಪನ ಬಾದಶಹರು ಅಲ್ಲಿಗೆ ದಯಮಾಡಿಸಿದರು. ಒಬ್ಬರು ಇಬ್ಬರು ನಾಲ್ವರು ಹಿಂದೆ ನೂರಾರು ಜನ ಕೂಡಿದರು. ಬಾದಶಹರು ಗೋಧಿ ಹೊರೆಗಳ ಕತೆಯೆಲ್ಲ ಕೇಳಿದರು. ಬಹಳವಾಗಿ ಸಂತೋಷಪಟ್ಟರು.

ನಾಲ್ಕು ತೆನೆ ಹೊರೆಗಳನ್ನು ಆಗಲೇ ಅಲ್ಲೇ ಬಡಿಸಿದರು. ಒಕ್ಕಿದರು, ತೂರಿದರು, ಒಡೆದರು, ಹುಗ್ಗಿ ಮಾಡಿಸಿ ಫಕೀರರಿಗೆ ಉಣಿಸಿದರು.

ಇಬ್ಬರು ಒಡಹುಟ್ಟಿದವರು ಒಲುಮೆಯನ್ನು ತೋರಿಸಿದ ಆ ಮಹಾಪವಿತ್ರ ಜಾಗದಲ್ಲಿ ಶಂಕುಸ್ಥಾಪನೆ ಮಾಡಿದರು. ಒಂದು ವರ್ಷದಲ್ಲೇ ಮಸೀದಿಯನ್ನು ಕಟ್ಟಿಸಿದರು. ಕರೀಮನು ತನ್ನ ಆಸ್ತಿಯನ್ನೆಲ್ಲ ಬಡ ಫಕೀರರಿಗೆ ದಾನ ಮಾಡಿದನು. ರಹೀಮನ ಕನಸು ನಿಶ್ಚಯವಾಯಿತು. ಮಸೀದಿಯ ಬಾಗಿಲು ಸದಾ ತೆಗೆದಿರುತ್ತದೆ. ಮೌಸಿನನು ಹೊತ್ತು ಹೊತ್ತಿಗೂ ಕೂಗುವನು–ಹೈಯ್ಯಾಲಸ್ಸಲಾತ್! ಹೈಯ್ಯಾಲಸ್‌ಲಾತ್! 'ಇತ್ತ ಕಡೆಯವರು ಬನ್ನಿ! ಅತ್ತಕಡೆಯವರು ಬನ್ನಿ!'—ಎಂದು ಕೂಗುತ್ತ ಇದ್ದ ರಹೀಂ ದಂಪತಿಗಳಿಗೆ ಇನ್ನೆಷ್ಟು ಸಂತೋಷವೋ ! ರಹೀಮನ ಕನಸು ಅದ್ಭುತ ರೂಪವನ್ನು ಕಂಡಿತ್ತು.

———

## ಅರಸನ ಬೇನೆ

ಅರಮನೆಯಲ್ಲೆಲ್ಲ ಬಲು ಗದ್ದಲ. ಅರಸನಿಗೆ ಖಾಯಿಲೆ, ವೈದ್ಯರು ಬಂದರು ಬಂದರು. ಒಂದು ಸಾವಿರ ಜನ ಬಂದರು. ಹತ್ತು ಇಪ್ಪತ್ತು ಜನ ಗುಂಪಾಗಿ ಬರೋದು; ಬಂದು ಒಬ್ಬರು ಕಾಲುಮುಟ್ಟಿನೋಡೋದು, ಇನ್ನೊಬ್ಬರು ಕೈಹಿಸಿಕಿ ನೋಡೋದು, ಎದೇ ಮುಟ್ಟಿ ನೋಡೋದು, ಕಣ್ಣ ರೆಪ್ಪೆ ಎಳೆದು ನೋಡೋದು— ಹೀಗೆಲ್ಲಾ ಬಲು ವಿಧವಾಗಿ ನೋಡಿದರು ಕೆಲವರು 'ಇವನಿಗೇನು ಕೇಡು ಬಂತು, ಹೀಗೆ ಬಿದ್ದುಕೊಂಡಿದ್ದಾನೆ;' ಮತ್ತೆ ಕೆಲವರು, 'ಖಾಯಿಲೆ ಖಸಾಲೆ ಏನೂ ಇಲ್ಲ'; ಮತ್ತೂ ಒಂದೆರಡು ಜನ, ರಾಜಮನೆತನದವರ ವಿಚಾರವಲ್ಲವೆ ? ನಮಗೆ, ನಿಮಗೆ, ಬರುವಂಥಾ ಕಾಯಿಲೆ ಇವರಿಗೆ ಬರುತ್ತದೆಯೇ ! ಚರಕನ ಪುಸ್ತಕವನ್ನು ತಿರುವಿಹಾಕಿ ನೋಡೋಣ. ಅದುವರೆಗೆ, ಯಾವುದಾದರೂ ಒಂದು ಕುಪ್ಪಿ ಮಾತ್ರೆಯನ್ನು ಕೊಟ್ಟರಾಯಿತು ' ಎಂತ ಹೀಗೆಲ್ಲಾ ಮಾತಾಡಿಕೊಂಡರು

ಅರಸನಾದರೋ, ಒಂದೆರಡು ದಿನ ನೋಡಿದನು. ಖಾಯಿಲೆ ವಾಸಿಯಾಗಲಿಲ್ಲ. ಅದುವರೆಗೆ ಔಷಧ ಪಥ್ಯ ಮಾಡಿದವರನ್ನೆಲ್ಲಾ ಕೊಲ್ಲಿಸಿದನು. ಇನ್ನೂ ಒಂದಿಷ್ಟು ಜನ ವೈದ್ಯರಿಗೆ ಹೇಳಿಕಳುಹಿಸಿದನು. ಮಂತ್ರಿಯು ಅಪ್ಪಣೆ

ಮಾಡಿ ವೈದ್ಯಶಾಲೆಗೆ ಹೇಳಿಕಳುಹಿಸಿದನು. ಪರರಾಜ್ಯಗಳಿಗೂ ಹೇಳಿ ಕಳುಹಿಸಿದರು.

'ಆದರೆ, ಖಾಯಿಲೆಯಾಗಿದೆಯೆ ಅರಸನಿಗೆ? ನಮ್ಮ ನಿಮ್ಮಲ್ಲೇ ವಿಚಾರ ಮಾಡೋಣ. ಅಲ್ಲಿ ನೋಡಿ ಅರಸನನ್ನು, ಕಣ್ಣು ಕಾಂತಿ ಕಡಿಮೆಯಾಗಿಲ್ಲ. ಗಲ್ಲದ ಕೆಂಪು ಕಂದಿಲ್ಲ. ತುಟಿಗಳ ಮೆರಗು ಹೋಗಿಲ್ಲ. ಕೈ ಕಾಲು ಸೊರಗಿಲ್ಲ. ಊಟದಲ್ಲಿ ಕಡಿಮೆಯಾಗಿಲ್ಲ. ನಿದ್ರೆಯಲ್ಲಿ ಅವನ್ನ ಬಿಟ್ಟರೆ ಇನ್ನಿಲ್ಲ. ಖಾಯಿಲೆ ಇನ್ನೆಂಥಾದ್ದು?' ಹೀಗೆ ಊರ ಜನರೆಲ್ಲಾ ಮಾತನಾಡಿಕೊಂಡರು. ನಮಗೇನು ಗೊತ್ತು? ಎಂತ ಎಲ್ಲರೂ ಸುಮ್ಮನಾದರು.

ಅರಸಿನ ಅರಿಯದ ಖಾಯಿಲೆಗೆ, ಸಾವಿರಾರು ಮಂದಿ ವೈದ್ಯರು ಸತ್ತು ಹೋದರು. ಕಟ್ಟಕಡೆಗೆ ಇಬ್ಬರು ಮುದಿ ವೈದ್ಯರು ಬಂದರು. ಎಂದಿನಂತೆ ಅರಸನು ಅವರನ್ನು ಕರೆಯಿಸಿಕೊಂಡನು. ವೈದ್ಯರಿಬ್ಬರೂ ಗಟ್ಟಿಗರೇ ಸರಿ. ಅವರಲ್ಲಿ ಒಬ್ಬನು ತೆಳ್ಳಗೆ ಸೊರಗಿಕೊಂಡಿದ್ದಾನೆ. ಆತನು ಓದದೇ ಇದ್ದ ಪುಸ್ತಕವೇ ಇಲ್ಲ. ಆ ಓದಿನ ಗದ್ದಲದಲ್ಲಿ, ಅವನು ಊಟ ತಿಂಡಿ ಇವುಗಳನ್ನೇ ಮರೆತುಬಿಟ್ಟಿದ್ದನು. ಇನ್ನೊಬ್ಬನು ಸುಖವಾಗಿ ಕಾಲಕಳೆದುಕೊಂಡಿದ್ದನು. ರೋಗಿಗಳು, ಬೇಡವೆಂದರೂ ಅವನಲ್ಲಿಗೆ ನುಗ್ಗಿ ಬರುವರು. ಅವನು ಕೊಟ್ಟಿದ್ದನ್ನು ಕುಡಿಯುವರು. ಬದುಕಿದರೆ ಬೇಕಾದಷ್ಟು ಪುರಸ್ಕಾರ ಮಾಡುವರು. ಇಲ್ಲ,

ಅವರ ಆಯುಸ್ಸು ತೀರಿತೇ ಅವರ ಕಡೆಯವರಿಂದ ಅವರು ಹೇಳಿದ್ದರ ಎರಡರಷ್ಟನ್ನು ತೆಗೆದುಕೊಳ್ಳುವನು. ಇಂಥಾ ಇಬ್ಬರು ವೈದ್ಯರೂ, ಮುಂದೆ ಬಂದು ಅರಸರ ಎದೆಗೆ ಕಿವಿಗೊಟ್ಟು ಕೇಳಿದರು. ನಾಡಿಯನ್ನು ಹಿಡಿದು ನೋಡಿದರು. ಮತ್ತೆಯೂ ನಾಡಿಯನ್ನು ಹಿಡಿದು ನೋಡಿದರು. ನಾಲಗೆಯನ್ನು ನೋಡಿದರು. ದಿಕ್ಕುತೋಚದೆ ನಿಂತರು. ಬಹಳ ಓದಿ ಸಣಕಲೆಯಾಗಿದ್ದ ವೈದ್ಯರು ಖಾಯಿಲೆ ಯಾವುದೂ ಇಲ್ಲವೆಂದನು. ರಾಜನಿಗೆ ಸಿಟ್ಟು ಬಂತು. ರಾಜರ ಕೋಪ ಕೇಳಬೇಕೆ !—ಕಾಡುಕಿಚ್ಚು. —'ಈ ಧೂರ್ತನನ್ನು ಗಲ್ಲಿಗೆ ಹಾಕಿ" ಎಂದು ಕೂಗಾಡಿದನು. ಸಿಪಾಯಿಗಳು ಬಂದು, ಮುದಿವೈದ್ಯನಿಗೆ ಹಿಂಗಟ್ಟು ಮುಂಗಟ್ಟಿ, ಸೆಳೆದುಕೊಂಡು ಹೋದರು.

ಬಂದಿತಲ್ಲಪ್ಪ ಕಷ್ಟ ಉಳಿದ ಇನ್ನೊಬ್ಬನಿಗೆ! ಅವನೋ ನಡುಗುತ್ತ ಹಿಂದಕ್ಕೆ ಸರಿದನು. ರಾಜನು ಬಿಟ್ಟಾನೆ? 'ಎಲ್ಲಿ ನೀನೇನು ಬೊಗಳುತ್ತಿ' ಎಂದು ಗದರಿಸಿದನು. ವೈದ್ಯನು "ಬಡ ಕೈಕಾಲುಗಳೇ ನಡುಗಬೇಡಿರಿ, ಸ್ವಲ್ಪ ನಿಧಾನಿಸಿ," ಎಂದು ಹೇಳಿಕೊಂಡು, ತಲೆಯನ್ನು ತಗ್ಗಿಸಿದನು. ಏನೋ ಯೋಚನೆ ಬಂತು! ಒಂದು ಕಾಗದದ ಚೂರನ್ನು ತೆಗೆದುಕೊಂಡು, ಏನೇನೋ ಬರೆದುಕೊಟ್ಟನು.

ರಾಜನು ಓದಿಕೊಂಡನು. ಅದರಲ್ಲಿ ಹಿಗೆ ಬರೆದಿತ್ತು: 'ಅರಸರೇ! ತಮಗೆ ಬಂದಿರುವ ಬೇನೆಯು

ಬಲು ಕಠಿಣತರವಾದುದು. ಇದಕ್ಕೆ ಚರಕಶುಶ್ರುತದಲ್ಲಿ ಮದ್ದು ಹೇಳಿಲ್ಲ. ಇನ್ನೊಂದರಲ್ಲಿ ಹೀಗೆ ಹೇಳಿದೆ. ಇಂಥಾ ಕಾಯಿಲೆಯು, ಅರಸರಿಗೇ ಸರಿ ಬರುವುದು. ಅರಸರು ಒಂದು ರಾತ್ರಿ ಮಾತ್ರಕ್ಕೆ ಎಂದೆಂದೂ ದುಃಖವನ್ನೇ ಕಾಣದೆ ಇರುವವನ ಕಂಬಳಿಯನ್ನು ಹೊದ್ದು ಮಲಗ ಬೇಕು. ಹಾಗಾದರೇ ಸರಿ, ಖಾಯಿಲೆ ವಾಸಿಯಾಗು ವುದು.

ಸರಿ, ಹುಡುಕುವುದಕ್ಕೆ ಪ್ರಾರಂಭ! ಇದುವರೆಗೂ ವೈದ್ಯರನ್ನು ಹುಡುಕಿದ್ದಾಯ್ತು. ಇನ್ನು ಔಷಧಿಯನ್ನು ! ರಾಜನ ಕೆಲಸಕ್ಕೇನು ಜನ ಕಡಿಮೆಯೇ? ಹೊರಟರು, ಹೊರಟರು, ನೂರಾರು ಜನ ಕುದುರೆಯ ಮೇಲೆ ದೌಡಾದೌಡಿ ಹೊರಟರು. ರಾಜ್ಯವನ್ನೆಲ್ಲಾ ಹುಡುಕಿದರು.

ಈ ಹೊತ್ತಿಗಿದ್ದರೆ ನಾಳೆಗಿಲ್ಲದವರು, ಉಡುವುದ ಕ್ಕಿದ್ದರೆ, ಹೊದೆಯುವುದಕ್ಕಿಲ್ಲದವರು, ಹೀಗೆ ದುಃಖ ದಲ್ಲಿ ಮುಳುಗಿರುವ ಬಡವರಿಗೆ ಸುಖವೆಲ್ಲಿಯದು? ಆದ್ದರಿಂದ ಅರಸನಿಗೆ ಬೇಕಾದ ಕಂಬಳಿ ಐಶ್ವರ್ಯವಂತ ರಲ್ಲಿ ಇರಬೇಕು. ಹೀಗೆಂದುಕೊಂಡು ಸವಾರರು ಮುಂದಕ್ಕೆ ಹೊರಟರು. ರಾಜನಿಗಾದರೋ ನಿತ್ಯ ವರ್ತ ಮಾನ ಬರುತ್ತಿತ್ತು.

ಕೃಷ್ಣೇ ಅರಸರು ಬಲು ಭಾಗ್ಯವಂತರು. ಆದರೆ ಅವರ ಖಾಸಾ ಮಗಳು ತೀರಿಹೋಗಿ, ಇನ್ನೂ ಹತ್ತು ದಿನಗಳಾಗಿಲ್ಲ. ಅವರನ್ನು ಮಾತನಾಡಿಸುವ ಹಾಗಿಲ್ಲ.

ರಹೀಂ ಸಾಹೇಬರ ಕಂಬಳಿ ಆಗಬಹುದೋ? ಅದಕ್ಕೇನು! ಔಷಧಿಯ ಹಾಗೆ ಹೊದೆಯುವುದಕ್ಕೆ ಕೇಳಿ ನೋಡಿ! ಆದರೆ ಅವರ ಕಣ್ಣೀರು ನಿಲ್ಲುವಹಾಗಿಲ್ಲ. ಅವರದೊಂದು ನವಿಲು ಸತ್ತುಹೋಯಿತಂತೆ. ರಾಮೇಗೌಡರು ತಲೇ ಎತ್ತುವಹಾಗಿಲ್ಲ ಅವರ ಮನೆಯ ದನಗಳನ್ನು ಹುಲಿ ಹಿಡಿದಿದೆ! ಅಳುವ ಕೂಸಿಗೆ ಸಹ ಹಾಲಿಲ್ಲ! ಹೀಗೆ ಒಂದಲ್ಲಾ ಒಂದು ಕಷ್ಟ. ಅಂತೂ ಇಂತೂ ಅರಸರಿಗೆ ಔಷಧಿ ಸಿಕ್ಕದಂತಾಯಿತು.

ಕಟ್ಟಕಡೆಯ ಸಾರಿ ನೋಡಿಬಿಡೋಣವೆಂದು, ಕುದುರೆಯ ಮೇಲೆ ರಾವುತರು ತೇಗುತ್ತಾ ಬರುತ್ತಿರುವಾಗ್ಗೆ, ಒಂದು ಊರಿನ ಮಾರಿಗುಡಿಯ ಮುಂದೆ, ಮೈದಾನದಲ್ಲಿ, ಹುಲ್ಲುಕಡ್ಡಿಯನ್ನಗಿಯುತ್ತಾ ಒಬ್ಬನು ಮಲಗಿದ್ದನು. ಅವನ ಮುಖದಲ್ಲೋ, ಆನಂದವು ಉಕ್ಕುತ್ತಲಿತ್ತು! ತುಂಡಾಂಡಿಯಾಗಿ ಸಿಳ್ಳು ಹಾಕುತ್ತಾ, ಚಪ್ಪಾಳೆ ಬಡಿಯುತ್ತಾ ಮಲಗಿದ್ದನು. ಅವನಿಗೆ ತೃಣ ಮಾತ್ರದಷ್ಟೂ ದುಃಖ ಕೊರತೆ ಯಾವುವೂ ಇರಲೇ ಇಲ್ಲ.

ರಾವುತರು ಕುದುರೆಯನ್ನು ನಿಲ್ಲಿಸಿದರು: 'ಅಣ್ಣಾ ಇದ್ಯಾಕಣ್ಣಾ! ಹೀಂಗೆ ಇದ್ದೀಯ?' ಎಂದರು. 'ಇನ್ನೇಂಗೆ ಮತ್ತೆ! ಕೂತ್ಕೊಂಡು ಗಳಗಳ ಅಳಲ ನಮ್ಮ ರಾಜ ರಾಂಗೆ!' ಎಂದು ಹೇಳಿ ಹೊರಳಾಡಿ ನಕ್ಕನು. ಈ ಮಾತಿನಿಂದ ಅವರು ಬಹಳ ಸಂತೋಷಪಟ್ಟರು. ಇನ್ನೇನು ರಾಜರಿಗೆ ಬೇಕಾದ್ದು ಇಲ್ಲಿ ಸಿಕ್ಕಿತೆಂದು ಹೇಳಿದರು.—

"ಅಪ್ಪ ಆನಂದಪ್ಪ! ನೀ ಹೊದೆಯೋ , ಕಂಬ್ಳೀ ಕೊ ಟ್ಟೆ ಯೋ? ಒಂದಿನ್ನೂರ್ರೂಪಾಯಿಯಾದರೂ ಕೊಟ್ಟೇವು! ಒಂದು ರಾತ್ರಿ ಮಾತ್ರ ಕೊಡಣ್ಣ" ಹೀಗೆ ಅಂಗಲಾಚಿ ಬೇಡಿಕೊಂಡರು. ಕೇಳುವವರೆಗೂ ಕೇಳು ತ್ತಿದ್ದ ಅನಂತರ ಆ ಪೋಲಿಯು ಚಪ್ಪಾಳೆ ತಟ್ಟಿ ನಗುತ್ತಾ "ಅದ್ಯಾಕಾ?" ಎಂದನು. ರಾವುತರು ಹೇಳಿ ದರು. "ನಮ್ಮ ಅರಸರಿಗೆ ಬೇನೆ ಬಂದಿದೆ, ಆ ನಿನ್ನ ಕಂಬಳಿಯನ್ನು ಹೊದ್ದುಕೊಂಡರೆ ಹೋಗುತ್ತಂತೆ". ಪೋಲಿಯು "ಇಷ್ಟೆಲ್ಲಾ ಮಾಡೋರಿಗೆ, ರಾಜ್ಯ ಆಳೋ ರಿಗೆ, ಇಷ್ಟೂ ತಿಳಿಲಿಲ್ವಾ!" ಎಂದು ಹೇಳಿ ಹೊರಳಾ ಡುತ್ತಾ ನಕ್ಕನು. ರಾವುತರು ಏನೂ ತಿಳಿಯಲಾರದೆ "ಅದೇನಣ್ಣಯ್ಯಾ ಹೇಳು ನೋಡೋಣ" ಎನ್ನುತ್ತಲೆ ಆವನು 'ನನ್ನ ಹತ್ತಿರ ಕಂಬಳಿಯಿಲ್ಲ ಅನ್ನೋದು' ಎಂದು ಮತ್ತೆ ನಕ್ಕನು.

ಮಾರಿಗುಡಿಯ ಮುಂದಣ ಹುಲ್ಲೆಲ್ಲಾ ಮುರಿದು ಮೆತ್ತಗಾದವು.... ಹೊರಳಿದನು.

*　　*　　*　　*

ಈ ವಿಚಾರವೆಲ್ಲಾ ರಾಜನಿಗೆ ತಿಳಿಯಿತು. ಆತನ ಬೇನೆಯ ಗುಟ್ಟು ಆತನಿಗೆ ಗೊತ್ತಾಯಿತು. ತನ್ನ ಕೆಲಸ ತಾನು ಮಾಡಿಕೊಳ್ಳುತ್ತಾ ಬಂದನು. ರಾಜ್ಯವು ಸುಭಿಕ್ಷ ವಾಯಿತು. ಅರಸನಿಗೆ ಖಾಯಿಲೆಯು ದೂರವಾಯಿತು.



# ಮಕ್ಕಳ ಮುತ್ತಿನ ಮಾಲೆ

---

| | | | | |
|---|---|---|---|---|
| ೧ | ಬೊಮ್ಮನಹಳ್ಳಿಯ ಕಿಂದರಿಜೋಗಿ—**ಕುವೆಂಪು** | ೦ | ೮ | ೦ |
| ೨ | ಹೂವಾಡಿಗಿತ್ತಿ—**ರಾಘವ** .... .... | ೦ | ೪ | ೦ |
| ೩ | ಚಟಾಕಿ—**ಎಲ್. ಗುಂಡಪ್ಪ** .. .... | ೦ | ೮ | ೦ |
| ೪ | ನನ್ನ ಮನೆ—**ಕುವೆಂಪು** .. .... | ೦ | ೬ | ೦ |
| ೫ | ಚಂದ್ರನನ್ನು ತಂದರು .... .... | ೦ | ೮ | ೦ |
| ೬ | ಮರಿ ವಿಜ್ಞಾನಿ—**ಕುವೆಂಪು** .... .... | ೦ | ೬ | ೦ |
| ೭ | ಆರು ಹಂಸಗಳು .... | ೦ | ೮ | ೦ |
| ೮ | ಮೋಘಪುರ—**ಕುವೆಂಪು** .. | ೦ | ೬ | ೦ |
| ೯ | ಪೋರಿ—**ಹೊಯಿಸಳ** .... | ೦ | ೮ | ೦ |
| ೧೦-೧೨ | ಪುಟ್ಟರಸು—**ಹೊಯಿಸಳ** .... .. | ೧ | ೦ | ೦ |
| ೧೩ | ಹೂವಿನ ಹಾಸಿಗೆ—**ಹೊಯಿಸಳ** ... | ೧ | ೪ | ೦ |

---